# ಅಚಲ

ದ್ವೈಮಾಸಿಕ

ಜುಲೈ 1995 ಬೆಲೆ ರೂ. 2-00

ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ
ಬೆಂಗಳೂರು

29



"ಅಚಲ'' ಪತ್ರಿಕೆಯನ್ನು ಪಡೆಯ ಬಯಸುವವರು ದಯವಿಟ್ಟು ಕೆಳಗಿನ ವಿಳಾಸಕ್ಕೆ ಹದಿನೈದು ರೂಪಾಯಿಗಳನ್ನು ಎಂ.ಒ./ಡ್ರಾಫ್ಟ್ ಮೂಲಕ ಕಳುಹಿಸಿ, ಕೂಪನ್‌ನಲ್ಲಿ ತಮ್ಮ ವಿಳಾಸವನ್ನು ಸ್ಪಷ್ಟವಾಗಿ ಬರೆಯಬೇಕು. **ಚೆಕ್ ಮೂಲಕ ಹಣ ಕಳಿಸುವವರು 20/ ರೂ. ಗಳಿಗೆ ಕಳಿಸಬೇಕು. ಚಂದಾದಾರರು ತಮ್ಮ ವಿಳಾಸ ಬದಲಾದರೆ ಕೂಡಲೆ ಕಾರ್ಡಿನಲ್ಲಿ ಬರೆದು ತಿಳಿಸಬೇಕು.**

ಲೇಖನ, ಹಣ ಕಳುಹಿಸಬೇಕಾದ ವಿಳಾಸ :—

**ಎನ್. ಗಾಯತ್ರಿ**
ಬಿ-30, ರಿಸರ್ವ್ ಬ್ಯಾಂಕ್ ಸ್ಟಾಫ್ ಕ್ವಾರ್ಟರ್ಸ್
9ನೇ ಕ್ರಾಸ್, ಒಂದನೇ ಮೇನ್
ವಿಜಯನಗರ 2ನೇ ಹಂತ
ಬೆಂಗಳೂರು-560040

ಚಂದಾ ವಿವರ :

| | |
|---|---|
| ವಾರ್ಷಿಕ ಚಂದಾ | : ರೂ. 15.00 |
| ಆಜೀವ ಚಂದಾ | : ರೂ. 150.00 |
| (ಚೆಕ್ ಮೂಲಕ | : ರೂ. 160.00 |
| ಸಂಸ್ಥೆಗಳಿಗೆ | : ರೂ. 200.00 |
| ಬಿಡಿ ಪ್ರತಿ | : ರೂ. 2.00 |
| ವಿಶೇಷ ಪ್ರತಿ | : ರೂ. 3.50 |

Printed at Lipi Mudrana,
No.1, Bugle Rock Road' Bangalore-4,
Published by Dr. G. Ramakrishna on behalf of Jagruthi Mahila Adhyayana Kendra, 26, I Main Road, Vyalikaval, Bangalore-3

Editor : N. Gayathri

## ಒಳಗೇನಿದೆ ?





## ಖಂಡನೆ

ಮಂಗಳೂರಿನ ಶ್ರದ್ಧಾನಂದ ಸೇವಾ ಆಶ್ರಮದಲ್ಲಿ ಅನಾಥ ಹೆಣ್ಣು ಮಕ್ಕಳ ಮೇಲೆ ನಡೆಯುತ್ತಾ ಬಂದಿರುವ ಲೈಂಗಿಕ ದೌರ್ಜನ್ಯವನ್ನು "ಅಚಲ'' ಖಂಡಿಸುತ್ತದೆ. ಈ ಸಂಬಂಧದಲ್ಲಿ ಮುಖ್ಯ ಆರೋಪಿಯಾಗಿರುವ ದೇವವ್ರತನಿಗೆ ಯಾವುದೇ ಹಂತದಲ್ಲೂ ಜಾಮೀನು ದೊರೆಯದಂತಾಗಕೂಡದು ಮತ್ತು ಅವನ ಅಪರಾಧಕ್ಕೆ ತಕ್ಕ ಶಿಕ್ಷೆಯಾಗಬೇಕೆಂದು ಅಚಲ ಒತ್ತಾಯಿಸುತ್ತದೆ. ಆಶ್ರಮದ ವ್ಯವಸ್ಥೆಯನ್ನು ನೋಡಿಕೊಳ್ಳಲು ಸಂಬಂಧಪಟ್ಟ ಸರ್ಕಾರದ ಇಲಾಖೆಯು ಆಡಳಿತಾಧಿಕಾರಿಯನ್ನು ನೇಮಿಸಿ, ನೊಂದವರಿಗೆ ಪರಿಹಾರ ಕಾಣಿಸಬೇಕೆಂದು ಒತ್ತಾಯಿಸುತ್ತದೆ.

# ಸಂಪಾದಕೀಯ

## ನೈನಾ ಪ್ರಕರಣ ಹಿಡಿದ ಕನ್ನಡಿ

ಇತ್ತೀಚೆಗೆ ದೇಶದಲ್ಲಿ ನಡೆದ ನೈನಾ ಸಾಹ್ನಿ ಪ್ರಕರಣ ಒಟ್ಟು ದೇಶದ ಸ್ಥಿತಿಗತಿಗೆ ಹಿಡಿದ ಕನ್ನಡಿಯಾಗಿದೆ. ಪ್ರಜಾಪ್ರಭುತ್ವ ರಾಷ್ಟ್ರವೊಂದರ ಅಣಕದಂತೆ ಕಾಣುವ ಈ ಪ್ರಸಂಗವು ಮಹಿಳೆಯರನ್ನು ಕುರಿತ ದಮನಕಾರಿಯಾದ ಸಂಸ್ಥೆಯಾದ ಪ್ರಭುತ್ವದ ವಿಕಾರ ಸ್ವರೂಪವನ್ನು ಬಯಲು ಮಾಡುತ್ತದೆ. ಅಷ್ಟೇ ಅಲ್ಲ ಈ ಪ್ರಕರಣ ಹಲವಾರು ಸತ್ಯಗಳನ್ನು, ಹಲವಾರು ಪ್ರಶ್ನೆಗಳನ್ನು ನಮ್ಮ ಮುಂದಿಡುತ್ತದೆ.

ಸ್ವಾತಂತ್ರ್ಯಾನಂತರ ದೇಶವನ್ನು ಆಳುತ್ತಾ ಬಂದಿರುವ ಕಾಂಗ್ರೆಸ್ ಸಂಸ್ಕೃತಿಯಲ್ಲಿ ಅದೆಷ್ಟು ಸುಶೀಲ್ ಶರ್ಮಗಳು ಆಗಿ ಹೋಗಿದ್ದಾರೋ, ಹಾಗೆಯೇ ಅದೆಷ್ಟು ನೈನಾ ಸಾಹ್ನಿಗಳು ಉರಿದು ಹೋಗಿದ್ದಾರೋ, ತಿಳಿಯದು. ಬೆಳಕಿಗೆ ಬಂದ ಈ ಒಂದು ಪ್ರಕರಣ ಮತ್ತು ಇಂಥ ಒಂದೆರಡು ಪ್ರಕರಣಗಳು ವಾಸ್ತವತೆಯ ಒಂದೆರಡು ಅಂಶಗಳನ್ನು ಹೊರಗೆ ಬಿಡಬಹುದಾದರೂ, ತುಂಬಿ ಸೋರುತ್ತಿರುವ ಭಾರತದ ರಾಜಕೀಯ ಕ್ಷೇತ್ರವನ್ನು ಊಹಿಸುವುದು ಯಾರಿಗೂ ಕಷ್ಟವಿಲ್ಲ. ಇಂತಹ ಪರಿಸ್ಥಿತಿಯಿದೆಯೆಂಬ ತಿಳುವಳಿಕೆ ಆ ಪಕ್ಷದ ವರಿಷ್ಠರಿಂದ ಹಿಡಿದು ಎಲ್ಲ ಹಂತದ ನಾಯಕರಿಗೂ ತಿಳಿದಿರುವ ವಿಷಯವಾದರೂ, ಹಾಗೆಯೇ ಅದು ನಡೆದುಕೊಂಡು ಹೋಗಲು ಅನುಮತಿಸುವ ಅವರೆಲ್ಲರೂ ಈ ಪ್ರಕರಣಕ್ಕೆ ಜವಾಬ್ದಾರರಲ್ಲವೇ? ಇಂಥ ಪರಿಸ್ಥಿತಿಯ ವಿರುದ್ಧ ಕೂಡ ಒಟ್ಟಾರೆ ಜನ ಜಾಗೃತಿಯ ಚಳುವಳಿ ಮೂಡಬೇಕಾದ್ದು ಅಗತ್ಯವಾಗಿದೆ.

ಇನ್ನು ದೇಶದ ಸಾರ್ವಭೌಮತೆಯನ್ನು ಕಾಯಬೇಕಾದ, ಸಾಮಾಜಿಕ ನ್ಯಾಯವನ್ನು ಪ್ರತಿಯೊಬ್ಬ ಪ್ರಜೆಗೂ ನೀಡಬೇಕಾದ ಪವಿತ್ರ ಜವಾಬ್ದಾರಿಯಿರುವ ನ್ಯಾಯಾಂಗ ಕೂಡ ಅಧಿಕಾರಸ್ಥರ ತಾಳಕ್ಕೆ ಕುಣಿಯುವಂತಾಗಿರುವುದು ನಿಜಕ್ಕೂ ಶೋಚನೀಯ, ಚಿಕ್ಕ ಪುಟ್ಟ ದಿನ ನಿತ್ಯದ ತಪ್ಪುಗಳಿಗೆ ನ್ಯಾಯಾಲಯದಲ್ಲಿ ಜಾಮೀನು ಸಿಗುವುದಕ್ಕೆ ತೆಗೆದುಕೊಳ್ಳಬಹುದಾದ ಸಮಯಕ್ಕಿಂತ ಕಡಿಮೆ ಅವಧಿಯಲ್ಲಿ ಕೊಲೆಗಾರನೊಬ್ಬ ಈ ದೇಶದಲ್ಲಿ ಜಾಮೀನು ಪಡೆಯುವುದು ಸಾಧ್ಯವಾಗಬಹುದಾದರೆ. ನ್ಯಾಯಾಂಗದ ಸ್ವಾಯತ್ತತೆಯ ಅರ್ಥ ಎಲ್ಲಿದೆ ? ಸೆರೆ ಮನೆಗಳಲ್ಲಿ ಕೈದಿಗಳ ಸೌಕರ್ಯಗಳು, ಸ್ಥಿತಿಗತಿಗಳು ಹದಗೆಟ್ಟಿವೆ ಎಂದು ಬೊಬ್ಬೆಯಿಡುತ್ತಿರುವ ಸಂದರ್ಭದಲ್ಲಿ ಸುಶೀಲ್ ಶರ್ಮನಂಥ ಹಾಡು ಹಗಲಿನ ಕೊಲೆಗಡುಕನಿಗೆ ರಾಜೋಪಚಾರ ನಡೆಯುವ ವ್ಯವಸ್ಥೆಯಿರುವುದೂ ನಾಚಿಕೆ ಗೇಡಲ್ಲವೇ ?

ಅಭ್ಯುದಯದ ಹಾದಿಯಲ್ಲಿ ಎಲ್ಲರಿಗೂ ಮಹತ್ವಾಕಾಂಕ್ಷೆಯಿರುವುದು, ಇರಬೇಕಾದ್ದು ಅಪೇಕ್ಷಣೀಯ. ಆದರೆ ಇದಕ್ಕೆ ಕಠಿಣ ಸಾಧನೆ, ಪರಿಶ್ರಮ ಅವಶ್ಯಕವಲ್ಲವೇ ? ಮಹತ್ವಾಕಾಂಕ್ಷೆಯ ಗುರಿಗೆ ಹೆಣ್ತನವನ್ನು ಬಂಡವಾಳ ಮಾಡಿಕೊಂಡ ನೈನಾನಂತಹವರು ಕಾಣದ ಇನ್ನೆಷ್ಟು ದೊಡ್ಡ ಅನಾಹುತಗಳನ್ನು ಎದುರಿಸ ಬೇಕೋ ಇವೆಲ್ಲ ಗಂಭೀರ ಚಿಂತನೆಗೆ ಒಳಗಾಗಬೇಕಾದ ಪ್ರಶ್ನೆಗಳು.

ಎನ್. ಗಾಯತ್ರಿ

## ಕಾ ವ್ಯ

### ಹೀಗೆ ಕೂತು ಮಾತಾಡದೆ

ಅಂಗಾಲಿಗೆ ಅಂಗಳದ ಅರಲು ಮೆತ್ತಿ
ಹುಲ್ಲ ಮೇಲಿನ ಹೆಜ್ಜೆಗೆ
ಇಡೀ ಮೈ ಬೆಚ್ಚಗಾಗಿ
ನೀರಮೇಲಿನ ಒದ್ದೆಗಾಳಿಗೆ
ಸುಖದಿಂದ ಮುಖ ಒಡ್ಡದೆ
ನಾವು ಹೊರಟಿದ್ದೆಲ್ಲಿ.

ಎದುರು ಬದರಿಗೆ ಕೂತು
ಅಂಗೈಯಲ್ಲಿ ಮುಂಗೈ ಒತ್ತಿ
ಎದೆಯ ಮಾತು ಬಾಯಾಗದೆ ;
ಕಣ್ಣೇಕೆ ಬರೇ ಗಾಜಿನ
ಗೋಲಿಯಾಯಿತು ಹೀಗೆ.

ಮಾತೆಂದರೆ ಮೌನವಾಗಿ
ಮೌನ ಅಖಂಡ ಭಾಷೆಯಾಗಿ
ಎದೆ ಎದೆಯ ಯಾನಕ್ಯಾಕೆ
ದಾರಿಯೇ ಸಿಗಲಿಲ್ಲ.

ಹಸಿಗಾಳಿ ಯೊಡಲಲ್ಲಿ
ಮಣ್ಣು ಕಳಿಸಿದ ಮಾತು
ಹೂವು ನಕ್ಕ ನಗೆಯು
ಚಿಗುರ ಚಿನ್ನದ ಕನಸು
ನಮ್ಮ ಹಾಯ್ದು ಹೋಗಲಿ.

ಎದುರು ಬದರಿನ ನಡುವೆ
ಖಂಡಖಂಡದ ಜಾಗ
ಆವಿಯಾಗಿದೆ ಮಾತು;
ಮಳೆಕಾಯ್ದು ಒಣ ಭೂಮಿ ಎದೆಯು
ಕಣ್ಣೀರ ಜಿನುಗಲ್ಲಿ ತೋಯ್ದು ಬಿಡಲಿ.

ಮಾತು ಒಳಗಿನ ಮನಸ
ದಾಟಿ ಬಂದಿಲ್ಲ, ಕರೆದು ತಂದಿಲ್ಲ
ಮೌನ ವೆಂದರೆ ನಡುಕ
ಉಕ್ಕೇರಿದ ಸಮುದ್ರ
ಅಲೆಯ ಮೇಲಿನ ನೊರೆಯೇ
ನಮ್ಮ ದೋಣಿ.

ಕೂತ ದೋಣಿಯಲೀಗ
ಭಾಷೆಯರಿಯದ ಮಾತು
ಮುದ್ದು ಮಗುವಿನ ಹಾಗೆ
ಎದ್ದು ಬರಲಿ.

---

### ವಾಸ್ತವ

ನನ್ನ ನೋವಿನೆದೆಯೊಂದು
ಗುಬ್ಬಿಗೂಡು.
ಒಳಗೆ ;
ಹುಳಹಿಕ್ಕೆ ಕಸಕಡ್ಡಿ
ಮರಿಯಾಗುವ ಮೊಟ್ಟೆ
ಹೊರಗೆ ;
ಚಿಂವ್ ಚಿಂವ್ ಚಿಲಿಪಿಲಿ
ಕಲ್ಲೆಸೆಯುವ ರಟ್ಟೆ.

— ಸುಧಾ ಶರ್ಮ ಚವತ್ತಿ

# ಅಂಬಿಕಾತನಯದತ್ತರ 'ಸ್ತ್ರೀ' ಕಲ್ಪನೆ

-ಡಾ|| ಜ್ಯೋತ್ಸ್ನಾ ಕಾಮತ್

ವರಕವಿ ದ. ರಾ. ಬೇಂದ್ರೆಯವರ ಕಾವ್ಯದ ಹಲವು ಆಯಾಮಗಳನ್ನು ಅನೇಕ ವಿದ್ವಾಂಸರು ಚರ್ಚಿಸಿದ್ದಾರೆ. ಎಷ್ಟೇ ಚರ್ಚಿಸಿದರೂ ಪ್ರತಿಸಲ ಅವರ ಕವಿತೆಗಳನ್ನು ಓದಿದಾಗ ಹೊಸ ಹೊಸ ಹೊಳಹುಗಳನ್ನು ಕಾಣಬಹುದಾಗಿದೆ, ಅವರ ಕಾವ್ಯದಲ್ಲಿ 'ನಾರಿ'ಯು ತಾಳಿದ ರೂಪಗಳು ಅಪಾರ, ಒಂದು ಉದ್ಗಾರ, ಒಂದು ಶ್ರದ್ಧಾಂಜಲಿಯಿಂದ ಪ್ರಾರಂಭವಾಗಿ ಗಾಯತ್ರಿ ಸೂಕ್ತ, ಸರಸ್ವತಿಗೆ ಆವಾಹನೆಯಂಥ ಅಧ್ಯಾತ್ಮದ ಶಿಖರ ತಲುಪಿದ ಕವನಗಳು ಅವರಿಂದ ಹೊಮ್ಮಿವೆ. ಅವರ ಕಾವ್ಯ ನಾಮ ಅಂಬಿಕಾತನಯ ದತ್ತ. ಮನೆಯ ಹೆಸರು ಶ್ರೀ ಮಾತಾ. ಚಿಕ್ಕಂದಿನಿಂದಲೂ ನಾರೀ ಶಕ್ತಿ, ಅವರ ಮಾನಸವನ್ನು ರೂಪಿಸಿದ್ದೇ ಒಂದು ವಿಶೇಷ.

ದತ್ತಾತ್ರೇಯ ರಾಮ ಚಂದ್ರ ಬೇಂದ್ರೆಯವರು ಸುಸಂಸ್ಕೃತ ಆದರೆಅತ್ಯಂತ ಬಡಕುಟುಂಬದಲ್ಲಿ 1896ರಲ್ಲಿ ಹುಟ್ಟಿದರು. ತಂದೆ ಸಂಸ್ಕೃತ ಪಂಡಿತರ ಕುಟುಂಬಕ್ಕೆ ಸೇರಿದವರಾದರೂ ಚಿಕ್ಕಂದಿನಲ್ಲೆ ಕಾಯಿಲೆ, ಆ ನಂತರ ಬುದ್ಧಿ ಭ್ರಮಣೆಯಿಂದ ಬಳಲಿದರು. ಅವರ ಅಜ್ಜಿ ಮತ್ತು ತಾಯಿಯವರು ಸೇರಿ ಸಣ್ಣ ಖಾನಾವಳಿಯನ್ನು ನಡೆಸುತ್ತ ಮನೆ ಮಕ್ಕಳನ್ನು ಸಂಭಾಳಿಸಿದರು. ಎಳೆತನದಿಂದಲೇ ಸೂಕ್ಷ್ಮ ಸಂವೇದನಾ ಶೀಲತೆಯನ್ನು ಬೆಳೆಸಿಕೊಂಡಿದ್ದ ಕವಿಯ ಮೇಲೆ ಹೆಂಗರುಳಿನ ಪ್ರಭಾವ ದಟ್ಟವಾಗಿತ್ತು. ತಮ್ಮ ಚಿಕ್ಕದಾದ ಆತ್ಮ ಚರಿತ್ರೆಯಲ್ಲಿ ಬೇಂದ್ರೆಯವರು ಅಜ್ಜಿಯ ಅಜ್ಜಿ, ಅಜ್ಜಿ ಮತ್ತು ತಾಯಿಯವರನ್ನು ಕೃತಜ್ಞತಾಪೂರ್ವಕವಾಗಿ ನೆನೆಸಿಕೊಂಡಿದ್ದಾರೆ. ಬೇಂದ್ರೆಯವರ ತಾಯಿಯನ್ನು ಅವರ ಅಜ್ಜಿ, ತಲವಾಯಿ ಗ್ರಾಮದ ಒಬ್ಬ ಬಡಿಗರ ಮನೆಯ ಗೋದಲೆಯಲ್ಲಿ ಪ್ರಸವಿಸಿದರಂತೆ ! ಸಾವುಗಳ ಸರಮಾಲೆಯನ್ನೆ ಎದುರಿಸುತ್ತ ತಾಯಿಗೆ ಅಜ್ಜಿ, ಅಜ್ಜಿಗೆ ತಾಯಿ, ಎರಡು ಜೀವ ಒಂದನ್ನೊಂದು ಅಂಟಿನಿಂತವು. ಬೇಂದ್ರೆಯವರ ತಾಯಿಯ ಹೆಸರು ಅಂಬೂತಾಯಿ, ಅವರ ಹೆಸರನ್ನೇ ಕಾವ್ಯ ನಾಮದಲ್ಲಿ ಸೇರಿಸಿಕೊಂಡು ಅಂಬಿಕಾತನಯ ದತ್ತರಾದರು. ಮಾತೃ ನಾಮಖ್ಯಾತನಾಗುವದು ಅಂದಿನ ಸಂಪ್ರದಾಯವಂತರಿಗೆ ಸರಿ ಕಾಣದೇ ಟೀಕೆಗೆ ಗುರಿಯಾದರು. ಮಾತೃ ಶಕ್ತಿಯ ಕುರಿತು ಅವರ ಶ್ರದ್ಧೆ ಅಪಾರವಾಗಿತ್ತು, ಅವರದೇ ಭಾಷೆಯಲ್ಲಿ ಹೇಳುವದಾದರೆ.

'ದೇಹ ಕೊಟ್ಟ ತಾಯಿ, ಮಾತು ಕಲಿಸಿದ ತಾಯಿ, ಸಂಸ್ಕಾರ ಸಂಪನ್ನ ಮಾಡಿದ ತಾಯಿ, ಭೂಮಂಡಲದ ಮಾನವತೆಯಲ್ಲಿ ನೆದೆಸಿದ ತಾಯಿ ವಿಶ್ವೋದರ ಧರಿಸಿದ ತಾಯಿ, ಈ ಐದು ಐದೆಯರು ದತ್ತನ ತಾಯಂದಿರು. ಇದು ಪಂಚಕೋಶ ಗರ್ಭ' ಎಂದು ಕರೆದುಕೊಂಡಿದ್ದಾರೆ.

"ತಂದೆಯ, ಅವನ ಬಳಗದ ನಿಕಟ ಸಾನ್ನಿಧ್ಯವನ್ನು ದೈವ ವಂಚಿತನಾದ ನಾನು ನನ್ನ ತಾಯಿ, ತಾಯಿಯ ತಾಯಿ, ಆಕೆಯ ತಾಯಿ, ಇವರ ಪ್ರತ್ಯಕ್ಷ ಚಾರಿತ್ರದಲ್ಲಿ ಪೌರುಷವನ್ನು ಕಂಡೆ. ನರಗುಂದದ ಬಂಡಾಯದ ಗುಂಡಾಯದಲ್ಲಿ ನನ್ನ ಅಜ್ಜಿಯ ತಾಯಿಯು, ಕಾಶೀ ವಿಶ್ವೇಶ್ವರನಲ್ಲಿ ಪ್ರಾಣರ್ಪಣೆ ಮಾಡಹೋರಟ ಯಜಮಾನನನ್ನು ಅನುಸರಿಸಿ ಆರೆಂಟು ವರ್ಷದ ಒಬ್ಬಳೇ ಒಬ್ಬ ಮಗಳನ್ನು ವೈವಕ್ಕೊಪಿಸಿ ಕಾಶಿಯಲ್ಲಿ ದೇಹವಿಟ್ಟಳು. ನನ್ನ ಅಜ್ಜಿಯು ಹದಿನೇಳು ಮಕ್ಕಳಲ್ಲಿ ನನ್ನ ತಾಯಿಯನ್ನು ಉಳಿಸಿಕೊಂಡು, ಆಕೆಯ ಮಗನಿಗೆ (ದತ್ತನಿಗೆ) ವಿದ್ಯೆಕಲಿಸಿ ಬಾಳು ನೀಗಿದಳು,'' ಎಂದು ತಮ್ಮ ಅಜ್ಜಿಯನ್ನು ನೆನೆಸಿ ಕೊಂಡಿದ್ದಾರೆ.

ತಾಯಿ ತೀರಿಕೊಂಡಾಗ ಕವಿಗೆ 29 ವರ್ಷ, ಮರಣ ಪೂರ್ವ ಆಕೆ ಕಂಡಕನಸು ಹೀಗಿತ್ತು "ದೇವಿಯ ಗುಡಿ ಅವಳಿದಿರು ಈಕೆ ಪಾರ್ಥನೆ ಮಾಡುತ್ತಾಳೆ, ಮತ್ತೇತಕ್ಕೂ ಅಲ್ಲ, ದಾನ, ಧರ್ಮಕ್ಕಾಗಿ ಸಾಕಷ್ಟು ಸಂಪತ್ತು ಕೊಡು' ಎಂದು ಪ್ರದಕ್ಷಿಣೆ ಹಾಕಿ ಬಂದು ನೋಡುತಾಳೆ. ದೇವಿಯಿದ್ದಲ್ಲಿ ದತ್ತ ಮೂರ್ತಿ ! ಈ ಕನಸಿನ ಅರ್ಥ ವೇನು ? ಎಂದು ಕೇಳಿದಳು ತಾಯಿ ನಾನೋ ಆಗ ರಾಷ್ಟ್ರೀಯ ಶಾಳೆಯ ಬಡಶಿಕ್ಷಕ, ಕೆಲವು ಕವನಗಳು ಮುದ್ರಿತವಾಗಿದ್ದವು.... ಕನಸಿನ ಅರ್ಥ

ಹೇಳಿದೆ. 'ನೀನು ಗೋದುಬಾಯಿಯ ಮಗಳು ಅಂಬಾಬಾಯಿ, ನಾನು ಅಂಬಿಕಾತನಯ ಕವಿ ಕನ್ನಡನಾಡಿಗೆ ಈ ದತ್ತನನ್ನೇ ದಾನಮಾಡಿದ್ದೀಯಾ ! ಮತ್ತೇನು ಬೇಕು ?' ಸಂಪಾದನೆ ಇಲ್ಲದವನ ಈ ಮಹಾಭಾಷ್ಯ ಅವಳನ್ನು ಅವಾಕ್ಕಾಗಿಸಿತು.''

ಮುಂದೆ ಕೆಲವೇ ದಿನಗಳಲ್ಲಿ ಸಾವನ್ನಪ್ಪಿದ ತಾಯಿಗೆ 'ಗಂಗಾಷ್ಟಕ' ಬರೆದು ಕವಿ ಪಿಂಡಾರ್ಪಣ ಮಾಡಿದರು. ಮಾತೆಯ ಪ್ರಪಂಚದಲ್ಲಿ ಮಾತಿನ ಪಿಂಡ ! ಮಾತೆ ಜ್ಯೋತಿರ್ಲಿಂಗ'........ ಎಂದು ಕಾಣುವದು ಜಾತ್ಯಂತರ ಸಿದ್ಧಿಯಲ್ಲವೇ ? ಎಂದಿದ್ದಾರೆ.

ಅಂಬಿಕಾತನಯ ದತ್ತ' ಹೆಸರಿನಲ್ಲಿ ಮೊದಲ ಕವಿತೆ ಮುದ್ರಿತವಾದದ್ದು 1918 ಶ್ರಾವಣದಲ್ಲಿ, ಅವರ ಕಾವ್ಯೋಪಾಸನೆ ಇದೇ ಹೆಸರಿನಲ್ಲಿ ಅವರ ಕೊನೆಯುಸುರಿನವರೆಗೆ, 1981ರ ತನಕ ಮುಂದರಿಯಿತು.

ಅವರ ಕವನಗಳಲ್ಲಿ ಸ್ತ್ರೀ ಸಂಕೇತಗಳು ರೂಪಗೊಳ್ಳುವ ಪರಿ, ವಿವಿಧ, ಶೃಂಗಾರ ಗೀತಗಳಿಗೆ ಪತ್ನಿಯನ್ನೇ ನಾಯಕಿಯನ್ನಾಗಿಸಿ 'ಸಖೀಗೀತ ಬರೆದರು. ಆಗಿನ ಕಾಲಕ್ಕೆ ಅದು ತುಂಬ ಕ್ರಾಂತಿ ಕಾರಿಯೆನಿಸಿದ್ದ ಸಂಕಲನ ವಾಗಿತ್ತು, "ಆತ ಕೊಟ್ಟ ವಸ್ತು ಒಡವೆ ನನಗೆ ಅವಗೆ ಗೊತ್ತು, ತೋಳುಗಳಿಗೆ ತೋಳಬಂದಿ, ಕೆನ್ನೆ ತುಂಬ ಮುತ್ತು'' ಈಗ ಈ ಶಬ್ದಗಳು ವಿಶೇಷ ವೆನಿಸದಿದ್ದರೂ 60 ವರ್ಷಗಳ ಹಿಂದೆ ಮಡಿವಂತಿಕೆಯಂಬುದು ಕಾವ್ಯಲೋಕಕ್ಕೂ ವ್ಯಾಪಿಸಿತ್ತು. ಸಖೀಗೀತಕ್ಕೆ ವಿಪರೀತ ಟೀಕೆ ಬಂದು ಒಂದೆಡೆ ಅವರೇ ಹೇಳಿಕೊಂಡಿದ್ದಾರೆ, 'ನನ್ನ ಪ್ರಣಯ ಗೀತೆಗಳನ್ನು ಓದಿ, ಕೇಳಿ, ಕೆಲವು ಆಧ್ಯ ಪ್ರಾಪಂಚಿಕರು ಮೂಗು ಮುರಿದರಂತೆ ! ಮುರಕೊಂಡ ಮೂಗು, ಮುಖಕ್ಕೆ ಏಕೆ ಮೂಗಬಟ್ಟಿಗೂ ಅಂದ ತರುವದಿಲ್ಲ. ಗೋಪಿಚಂದನಕ್ಕೂ ಒಂದು ಕಂಪು ಇರ್ರದ ಅದು ದ್ವಾರಕೆಯ ಭೂಮಿ ಗುಣ'' ತಾನು ಬರೆದದ್ದು, ಎನ್ನುವ ಅರ್ಥದಲ್ಲಿ ಉದ್ಗರಿಸಿದ್ದರು. ಮುಂದೆ ಇನ್ನೊಬ್ಬ ಕವಿ, ಇದನ್ನೇ "ಮಣ್ಣಿನ ವಾಸನೆ'' ಎಂಬ ಶಬ್ದ ಪ್ರಯೋಗದಲ್ಲಿ ವ್ಯಕ್ತಪಡಿಸಿದ್ದನ್ನು ಇಲ್ಲಿ ಸ್ಮರಿಸಿಕೊಳ್ಳ ಬಹುದು.

ಸಖೀಗೀತ ದೊಡ್ಡ ಆಲೆಯನ್ನು ಎಬ್ಬಿಸಿತು. ತರುಣ ಕವಿಯೊಬ್ಬ, ತನ್ನ ನವಪತ್ನಿಗಾಗಿ ಭಾವ ಪೂರ್ಣ ಕವನಗಳನ್ನು ಬರೆದರೆ ಆಶ್ಚರ್ಯವಿಲ್ಲ. 'ಮೈಸೂರ ಮಲ್ಲಿಗೆ'ಯ ಓದುಗರಿಗೆ ಅದು ಅಪರಿಚಿತವೂ ಅಲ್ಲ. ಆದರೆ ಅದೇ ಕವಿ 40 ವರ್ಷ ಸಂಸಾರ ಹೂಡಿದ ನಂತರವೂ ಪ್ರಾಣ ಸಖಿಯ ಕುರಿತು ಬರೆದ, ಇಂಥ ಕವಿಗಳು ಹೆಚ್ಚು ಜನ ಇರಲಿಕ್ಕಿಲ್ಲ. ಬೇಂದ್ರೆಯವರ ಪತ್ನಿ ಬಹಳ ಕಾಯಿಲೆ ಬಿದ್ದು, ಎಲ್ಲರೂ ಆಸೆ ಬಿಟ್ಟಿದ್ದರು, ಮುತ್ತೈದೆಗೆ ತಾನು ಹೊರಬಿದ್ದರೇ ಗೆಲುವು ಅನ್ನಿಸಿತು. ಆಗ ಈ ಮುತ್ತೈಯ್ಯ ಮುಳು ಮುಳು ಅತ್ತನಂತೆ ! ನಂತರ ಉದ್ಗರಿಸಿದ.

ಗೌರಿ, ನೀ ಮುಂದಾಗಿ ಹೋಗಿ
ಬಾಗಿಲು ತೆರೆಸು ವೈಕುಂಠದಲ್ಲಿ, ಧೃಷ್ಟರನು
ಒಳಗೆ ಬಿಡುವರೆ ? ಅಲ್ಲಿರುವ ದಿಂಡಿಗರು
ದಾಂಡಿಗರು
ನಾನೂ ಬಂದೆ. ನೀ ಮುಂದೆ,
ನಾನು ಹಿಂದೆ ಹಿಂದೆ.

ಆ ಹೊತ್ತಿಗೆ ಪತ್ನಿ ಲಕ್ಷ್ಮೀಬಾಯಿ ಹೇಗೋ ಚೇತರಿಸಿಕೊಂಡರು 10 ವರ್ಷಗಳ ನಂತರ ಅಂತಿಮ ಕರೆ ಬಂದಾಗ, ಮೃತ್ಯುಶಯ್ಯೆಯಲ್ಲಿದ್ದಾಕೆಯ ಕುರಿತು "ಸಖ್ಯದ ಆಖ್ಯಾನ'' ಉಕ್ಕಿತು.

ಸಖೀ, ನಮ್ಮ ಸಖ್ಯದ ಆಖ್ಯಾನ ಮುಗಿದಿಲ್ಲ ;
ಗುರು ಸೇವೆ ಉಳಿದದ ಇನ್ನೂ,
ಒಂದೇ ಥಾಟೇಲೆ, ಸಮರಸ ಸಾಟೇಲೆ
ಒಂದೇ ಭಜನೆಯ ಅನ್ನೂಣು.

ಎಂದು ದೀರ್ಘ ಕವನವನ್ನೇ ಬರೆದರು. ತನ್ನ ಕಾವ್ಯೋಪಾಸನೆಯಲ್ಲಿ ಪತ್ನಿ ಬಾಳಿನುದ್ದಕ್ಕೂ ಸಲ್ಲಿಸಿದ ಸೇವೆ, ಕೊಡಮಾಡಿದ ಸಹಕಾರಗಳನ್ನು ಸ್ಮರಿಸಿಕೊಂಡಿದ್ದಾರೆ.

ನೀನಾಗು ಕಿನ್ನರಿ, ನಾನು ಕಿನ್ನರನಾಗಿ
ಬಾರಿಸಿ ನೋಡುವೆ ಸಂಧಾನಾ
ನೀ ದೇವ ಗಾಂಧಾರಿ, ದೇವ ಗಂಧರ್ವನಾ
ದನಿ ಎತ್ತಿ ಹೇಳುವೆ ನವಗಾನಾ

ಎಂದು ಪ್ರಜ್ಞಾ ಹೀನಳಾದ ಪತ್ನಿಗೆ ಕಾವ್ಯಾಂಜಲಿ ಅರ್ಪಿಸಿದರು. ಸಾವನ್ನು ಎದುರಿಸಿದಾಗ ಅವರ ಕಾವ್ಯತ್ವ

ಉಕ್ಕಿ ತುಳುಕುತ್ತಿತ್ತು.

ಸಾದಾ ಸಾಂಸಾರಿಕ ಘಟನೆಯೂ ಈ ಮಹಾ ಕವಿಯ ಲೇಖನಿಯಲ್ಲಿ ಸಾರ್ವತ್ರಿಕತೆಯನ್ನು ಪಡೆಯು ತ್ತಿತ್ತು. ಅವರ ಆತ್ಮೀಯ ಸ್ನೇಹಿತನ ಮಗಳೊಬ್ಬಳು ತಮ್ಮೆದುರು ಆಡುತ್ತ ನಲಿಯುತ್ತ ಬೆಳೆದವಳು, ಬೇಗ ಮದುವೆಯಾಗಿ ಗಂಡನಮನೆಗೆ ಹೋದಳು, ಮೊದಲ ಬಾಣಂತನದಲ್ಲೇ ಸತ್ತು ಹೋದಳು. "ಪಾಡಾದಳು, ಹಣ್ಣಾದಳು, ಮಣ್ಣಾದಳು ಹುಡುಗಿ, ನೆನಪಾದಳು. ವ್ಯಥೆಯಾದಳು, ಕಥೆಯಾದಳು, ಎದೆಯಲ್ಲಿಯೇ ಮಡಗಿ. 'ಕಥೆಯಾದಳು ಹುಡುಗಿ' ಒಂದು ಪ್ರತಿಮೆಯಾಗಿ ಬೆಳೆದು ಬಂದ ಬಗೆಯಿದು,

ಬೇಂದ್ರೆ ತಮ್ಮ ಸ್ನೇಹಿತರೊಬ್ಬರಿಗೆ ಅವರ ವಿವಾಹ ಸಂದರ್ಭದಲ್ಲಿ ಹೇಳಿದ ಮಾತುಗಳನ್ನು ಅವರ ಸುಪುತ್ರ ಡಾ॥ ವಾಮನ ಬೇಂದ್ರೆ 'ಪುಟಬಂಗಾರ' (೫) ರಲ್ಲಿ ಉಲ್ಲೇಖಿಸಿದ್ದಾರೆ–

"ಪುರುಷನ ಲಗ್ನವಾಗುವವರೆಗೆ ಅವನ ಯೋಗ ಕ್ಷೇಮ ದೇವರು ನೋಡಿಕೊಳ್ಳುತ್ತಾನೆ, ಲಗ್ನವಾದ ಅನಂತರದಲ್ಲಿ ಆ ಕೆಲಸವನ್ನು ಧರ್ಮಪತ್ನಿಗೆ ವಹಿಸಿ ಕೊಟ್ಟು ದೇವರು ದೂರ ಹೋಗಿ ಬಿಡುತ್ತಾನೆ, ಆದು ದರಿಂದ ದೇವರಿಗೆ ಧರ್ಮಪತ್ನಿಯೇ ಪತಿಯ ಯೋಗ ಕ್ಷೇಮವನ್ನು ವಹಿಸಿಕೊಂಡ ದೇವರು, ಆವಳ ನಿರ್ಣ ಯವೇ ಕೌಟುಂಬಿಕ ಜೀವನದಲ್ಲಿ ಕೊನೆಯ ಮಾತಾಗ ಬೇಕು,'' ಮುಂದೆ, ಡಾ॥ ವಾಮನ ಬೇಂದ್ರೆ ಹೀಗೆ ಬರೆಯುತ್ತಾರೆ.

"ಈ ಮಾತು ಬೇಂದ್ರೆಯವರ ಕ್ರಾಂತಿಕಾರಕ ವಿಚಾರಗಳ ಪ್ರತೀಕವಾಗಿದೆ. ಪತಿಯೇ ಪರದೈವ ಎಂಬ ಸಂಪ್ರದಾಯ ಮೀರಿ, ಪತ್ನಿಯೇ ಪರದೈವ ಎಂದು ಬೇಂದ್ರೆಯವರ ಶ್ರದ್ಧೆ, ಈ ಶ್ರದ್ಧೆಯ ಮೂಲಕವೇ ಬೇಂದ್ರೆಯವರ ಕಾವ್ಯ ಮಹಿಳೆಯರ ಸತ್ವ ಶಕ್ತಿಯನ್ನು ಉದ್ದೀಪಿಸುವಲ್ಲಿ ಸಫಲತೆಯನ್ನು ಹೊಂದಿದೆ.''
ಪು. ಬ. ೫ ,

ಅವರ ಅತ್ಯಂತ ಜನಪ್ರಿಯ ಭಾವಗೀತೆ 'ಹುಬ್ಬಳ್ಳಿಯಾಂವ' ವಿರಹ ಭಾವವನ್ನು ತೀವ್ರವಾಗಿ ಸೂಚಿಸುತ್ತದೆ. 'ಚಹಾದ ಜೋಡಿ ಚೂಡಾದಾಂಗ' ಇನ್ನೊಂದು ಜಾಣ್ನುಡಿ 'ಜಲ್ಮ ಜಲ್ಮಕ ಗೆಣ್ಯಾ್ಯಾಗಿ ಬರಲೇನಂದಾವಾ ! ಎದಿಮ್ಯಾಗಿನ ಗೆಣತಿಮಾಡಿ ಇಟ್ಟು ಕೊಂಡಾಂವಾ ! ಈ ಸಾಲಿನಲ್ಲಿ ಗಮನಿಸ ಬೇಕಾದದ್ದು 'ಗೆಣತಿ' ಶಬ್ದದ ಪ್ರಯೋಗ, ಉತ್ತರ ಕರ್ನಾಟಕದಲ್ಲಿ ಮುಖದ ಮೇಲೆ, ಮೈ ಮೇಲೆ ಕಪ್ಪು ಚುಕ್ಕಿ ಇದ್ದರೆ ಶುಭ ಚಿಹ್ನೆ ಎನಿಸಿಕೊಳ್ಳುತ್ತದೆ. ಅದಕ್ಕೆ 'ಗೆಳತಿ' ಅಥವಾ 'ಗೆಣತಿ' (ಗ್ರಾಮ್ಯ) ಅನ್ನುತ್ತಾರೆ, ಹುಬ್ಬಳ್ಳಿಯ ತರುಣ ಈ ಜೋಗತಿ ಸೂಳೆಯನ್ನು ಎದೆಯ ಮೇಲಿನ ಗೆಳೆತಿಯಂತೆ ಇಟ್ಟು ಕೊಂಡಿದ್ದ. ಶ್ಲೇಷೆಯ ಅರ್ಥದಲ್ಲಿ ಸಂಬಂಧದ ಗಾಢತೆಯೊಂದಿಗೆ ಆ ತರುಣಿಯ ಜನ್ಮ ಕಲಂಕದ ಸೂಚನೆಯೂ ಬಂದಿದೆ. ಕಪ್ಪು ಚುಕ್ಕಿ ಆದರೆ ಗೆಳತಿ.

ಮಾನವೀಯತೆಯಲ್ಲಿ ದೈವತ್ವ ಕಂಡ ಕವಿಗೆ, ಎಳೆಯ ಕಂದನಲ್ಲಿ ಅದು ಸ್ಫುಟವಾಗಿ ಗೋಚರಿಸಿದ್ದರೆ ಅಚ್ಚರಿಯಲ್ಲ. ತಾಯಾಗಿ ಕಂದನನ್ನು ಕಂಡ ಪರಿಯಿದು.

ಕಂದಾ, ನಿನ್ನ ಮುಖದ ಮುದ್ರಾಕೃತಿಯು
ನನ್ನಂತಿದೆ
ಆದರೆ, ದೇಹದ ಭದ್ರಾಕೃತಿಯು ಅವರಂತಿದೆ.
ಕಂದಾ, ನನ್ನ ಕಣ್ಣೊಳಗಿನ ಕರುಣೆ ನನ್ನಂತಿದೆ
ಆಹಾಹಾ ! ಹುಟ್ಟಾ ಗೆಲ್ಲಬಲ್ಲ ಸೊಬಗುಗಾರ !

ಗಂಡುಗಾಡಿಯಲಿ ಹೆಣ್ಣ ಮೋಡಿ ಬೆರೆತು, ಅರ್ಧ ನಾರಿನಟೇಶ್ವರನ ಅಭಿನವ ಸೃಷ್ಟಿಯಾದೆಯಲ್ಲ ! ಕವಿಗೆ ಪ್ರತಿ ಮಗು ಅರ್ಧನಾರೀನಟೇಸ್ವರ ಬೇರ್ಪಡಿಸಲಾಗದ ಅಮೋಘ ಸೃಷ್ಟಿ.

ಈಗ ಜ್ವಲಂತ ಸಮಸ್ಯೆಯಾದ ಪರಿಸರನಾಶ 50 ವರ್ಷಗಳ ಹಿಂದೆಯೇ ಕವಿಯನ್ನು ಕಾಡಿತ್ತು. ಮಾನವ ಪ್ರಾಣಿ ಭೂಮಿ ತಾಯಿಯನ್ನು ಕಾಡಿದ ಬಗೆ ಅವರ ಕಳವಳದಲ್ಲಿ ವ್ಯಕ್ತವಾಗಿತ್ತು, "ಚಿಗರಿಗಂಗಳ ಚೆಲುವಿ' ಕವನದಲ್ಲಿ.

ಚಿಗರಿಗಂಗಳ ಚೆಲುವಿ ಚೆದರಿ ನಿಂತಾಳ
ನೋಡೋ ! ಬೆದರಿ ನಿಂತಾಳ.

ಭೂಮಿ, ಮನುಷ್ಯ ಸಂಬಂಧ ಅನ್ಯೋನ್ಯ. ಅದ ನ್ನರಿಯದ ಮಾನವ ಭೂಮಿಯನ್ನು ಸೂರೆಗೊಳ್ಳು ತ್ತಲೇ ಇದ್ದಾನೆ. ಭೂಮಿ ತಾಯಿಗೆ ಅನುಕಂಪವಾಗದೇ ಇದ್ದೀತೆ ?

ಬ್ಯಾಟಿ ನಾಯೊದರ‍್ಯಾವೊ, ಹಸುಜೀವ ಬೆದ
ರ‍್ಯಾವೋ

ಗಳಗಳನೆ ಗಿಡದೆಲಿ ಉದರ‍್ಯಾವೊ ! ದಿನ್ನಿ ಮಡ್ಡಿ ಗುಡ್ಡ ಅದರ‍್ಯಾವೊ, 'ಆದನ ತಾ ಕಂಡು ನೊಂದಾಳೋ, ಬೆಂದಾಳೋ, ಅಂದಾಳೋ.

ಇದು ಎಂಥಾ ಜೀವದ ಬ್ಯಾಟಿ ಹಾಡೇ ಹಗಲ.

ನಿಂತ ನೆಲವೆಂದು ತಡಿsಲಾಕೊ, ಹಡಿಲಾsಕೋ, ಬಡಿಲ್ಯಾಕೋ ! ಇದು ಒಡವ್ಯಲೋ ಮಗನೇ ಉಸಿರಿದ್ದ ಒಡಲು ಅಂತಾಳೋ-ಚಿಗರಿಗಂಗಳ ಚೆಲುವಿ !

ನಿಸರ್ಗದೇವಿ, ಕವಿಗೆ ಚಿಗರಿಗಂಗಳ ಚೆಲುವಿ ಇಂಥ ಸಶಕ್ತ ಕವನವನ್ನು ನಮ್ಮ ಪರಿಸರ ಪ್ರೇಮಿಗಳು ಏಕೆ ಬಳಸುತ್ತಿಲ್ಲವೋ !

'ಚಳಿಯಾಕೆ' ಒಂದು ಸೊಗಸಾದ ಪ್ರಕೃತಿ ಗೀತ. ಕವಿಗೆ ಚಳಿ ಬಂದು ವೈಯಾರದ ಹೆಣ್ಣು, ಆಕೆಯು ಹೆರಳಿಗೆ ಹೊನ್ನ ಸೇವಂತಿಗೆ, ಬಿಳಿಯು ಕೈಗೆ ಬಿಳಿಯು ಸೇವಂತಿಗೆಯು ಬಳೆಗಳ ಅಲಂಕಾರ. ಕಿವಿಗಳಲ್ಲಿ ಮುಗಿಲ ಮಲ್ಲಿಗೆಯು ಅಲ್ಲಾಡುವ ಓಲೆ-ಕೊಪ್ಪು ಹೊಳೆ–ಹೊಂಡಗಳ ಉಸಿರನ್ನೇ ನಯವಾಗಿ ನೇಯ್ದು ತಯಾರಿಸಿದ ಮಂಜಿನ ಮೇಲ್ ಸೆರಗು ಬೇರೆ. ಕಣ್ಣಿಗೆ ಕಾಣದೆ ಮೈಮುಚ್ಚಿ, ತುಟಿಮುಚ್ಚಿ.

ಮಿಸುಕದೆ ಮುಸುಕಿಗೆ ಹೋಗುವಾಕೆ ! ಅಡಿಗೊಮ್ಮೆ ನಡುನಡುಗಿ ಮೈಒಡೆದು, ತುಟಿಯೊಡೆದು, ನಡುಗುತ್ತ ಮುಸುಕು ಹೊದೆಯುವದು ಚಳಿಗಾಲದಲ್ಲಿ ಸಹಜವಲ್ಲವೇ ? ಕವಿಗಿದು ಚಳಿಯಾಕೆಯು ಚೇಷ್ಟೆ !

ಗಾಯತ್ರಿ ಸೂಕ್ತ ಬೇಂದ್ರೆಯವರ ಪ್ರಸಿದ್ಧ ಗೀತಗಳಲ್ಲಿ ಒಂದು. ಶಿವಮೊಗ್ಗೆಯ 1943ರ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಪದದಿಂದ 'ಸಾಹಿತ್ಯದ ವಿರಾಟ್ ಸ್ವರೂಪ' ಎಂಬ ಭಾಷಣ ಮಾಡಿದರು. ಅದಕ್ಕೆ ಪೂರ್ವಭಾವಿಯಾಗಿ 'ಗಾಯತ್ರಿ ಸೂಕ್ತ' ಒದಿದರು. ಕವಿಗೆ ಗಾಯತ್ರಿಯೆಂದರೆ ಸರಸ್ವತಿಯೇ. ಎಲ್ಲ ವಿದ್ಯೆ-ಕಲೆಗಳ ಮೂಲ ದೇವತೆ. ಋಗ್ವೇದದ ಈ ಮಂತ್ರ ರೂಪಿಣಿ, ಬ್ರಹ್ಮನ ರಾಣಿಯಾಗಿ, ಸ್ಕಂದ ಪುರಾಣದ ಶಿವೆ, ಶಕ್ತಿ–ಸಾಮರ್ಥ್ಯಗಳ ಪ್ರತೀಕವಾಗಿ, ಶ್ರೀಕೃಷ್ಣನ ಹೃದಯದಲ್ಲಿ ನೆಲೆಸುವ ಲಕ್ಷ್ಮಿಯೂ ಆಗುತ್ತಾಳೆ ! 'ಆಕೆ' ಎಂದು ಅಂತ್ಯ ಪ್ರಾಸ ಹೊಂದಿದ ಕವನ, ವೇದ ಸಂಸ್ಕೃತದಲ್ಲಿ ಕಃ ಕೆ ಎಂದರೆ ಶಕ್ತಿ-ಸಾಮರ್ಥ್ಯವುಳ್ಳ ಧೀಮತಿ ಎಂಬ ಅರ್ಥವೂ ಬರುತ್ತದಂತೆ.

ಸಕಲ ವಿಕಲಗಳ ಕಲೆಯು ಜಾಲದಲಿ ಬಲವ ಮೀರಿದಾಕೆ
ಚತುರ್ಮುಖನ ನಾಲಗೆಯು ಹಾಸಿ ತುಟಿ ದಿಂಬು ಮಾಡಿ
ದಾಕೆ
ವತ್ಸಲಾಂಛನದ ಹೃದಯ ಕಮಲದಲಿ ಮನೆಯ ಹೂಡಿ
ದಾಕೆ
ಹರನ ಮೈಯನರೆದುಂಬಿ ಲೀಲೆಯಲಿ ತಲೆಯನೇರಿದಾಕೆ.

ವರದ ಅಭಯಕರವಿರುವ ತಾಯಿಬಾ, ಬೇರೆ ಕರೆಯಬೇಕೆ ? ಎಂದು ವಿರಾಟ್ ಸ್ವರೂಪವ ತಾಯಿ ಸರಸ್ವತಿಯನ್ನು ಆಹ್ವಾನಿಸಿದ್ದಾರೆ.

ಸುಪ್ರಸಿದ್ಧ 'ಗಂಗಾವತರಣ' ಕವಿತೆಯೂ ಬೆಳಕು ಕಂಡದ್ದು ಶಿವಮೊಗ್ಗಾ ಸಾಹಿತ್ಯ ಸಮ್ಮೇಳನದಲ್ಲೇ. ಗಂಗೆ ಕೂಡ ವಾಗ್ದೇವಿಯೇ ! ಪ್ರತಿ ಸಾಲಿಗೆ ಪುರಾಣದ ಕಥೆಗಳನ್ನು ನೆನಪಿಸುವ ಈ ಕವನ ಸರಸ್ವತಿಗೆ ಪ್ರಾರ್ಥನೆ.

ಸಾದಾ ಜಾನಪದ ದೇವತೆ ಮಾರಮ್ಮ ಅಥವಾ ದುರ್ಗಮ್ಮನನ್ನು ಕಂಡರೂ ಅದೇ ಭಾವಾವೇಶದಿಂದ ಶಕ್ತಿಸ್ವರೂಪಿಣಿಯ ಹಾಡು ಹೊಮ್ಮುತ್ತಿತ್ತು.

ನಮ್ಮ ತಾಯಿ ಮಾಹೂರ ಗಡದಾಕಿ
ಕತ್ತಲಲಿ ಹಗಲುಪಂಜು ಹಿಡಿಸಿದಾಕಿ

ನತ್ತಿನಾಕಿ । ಗತ್ತಿನಾಕಿ । ಸುತ್ತಿನಾಕಿ । ಹೊತ್ತೊತ್ತಿಗೆ ನಾಡಿಗೆಲ್ಲ ಬದಗೋ ಆಕಿ.... ಬೇಕು ಬೇಡ ನೋಡಿಕೊಂಡು ಸಾಕಿದಾಕಿ । ಜನ್ಮ – ಮರಣ – ಮುಕ್ತಿಗಾಗಿ ಹಾಕಿದಾಕಿ.

ಒಟ್ಟಿನಲ್ಲಿ ಬೇಂದ್ರೆಯವರು ಶಕ್ತಿದೇವಿಯ ಹಲವಾರು ರೂಪಗಳನ್ನು ಹಲವು ಬಗೆಯಲ್ಲಿ ಕಂಡವರು.

ಅವರ ಕಾವ್ಯೋಪಾಸನೆಯಲ್ಲಿ ನಾರೀ ರೂಪ ತಾಳಿದ ಬಗೆಯನ್ನು ಸ್ವಲ್ಪದರಲ್ಲಿ ಗ್ರಹಿಸುವದು ಕಷ್ಟ ! ಮಗನಾಗಿ, ಪ್ರಾರಂಭಿಸಿ ಪ್ರೇಮಿಯಾಗಿ, ಪತಿಯಾಗಿ, ತಂದೆಯಾಗಿ, ಪ್ರಕೃತಿಯ ಉಪಾಸಕರಾಗಿ, ಸರಸ್ವತಿಯ ಭಕ್ತನಾಗಿ ಸ್ತ್ರೀ ರೂಪವನ್ನು ಕಂಡಿದ್ದಾರೆ.

ಕಳೆದ ಹತ್ತು ವರ್ಷಗಳಿಂದ ನೀನು ಹೇಳುತ್ತಾ ಹೋದೆ ! ನಾನು ಕೇಳುತ್ತಾ ಇದ್ದೆ !! ಈಗ ನಾನು ಹೇಳುತ್ತೇನೆ ಕೇಳುವುದು ನಿನ್ನ ಸರದಿ ! ಬದುಕಿನ ಈ ಮಹಾ ಓಟದಲ್ಲಿ ಎಷ್ಟೋ ಸಣ್ಣ ಸಣ್ಣ ತುಡಿತಗಳು ದಾಖಲಾಗುವುದೇ ಇಲ್ಲ ಅಲ್ಲವೇ ? ಅಂಥ ದಾಖಲಾತಿಗೆ ಪತ್ರ ಮಾಧ್ಯಮವೇ ಅತ್ಯುತ್ತಮ. ಅದಕ್ಕೆ ಈ ಪತ್ರ !

ಮೊನ್ನೆ ಹಾಲಮ್ಮ ಬಂದಿದ್ದಳು. ಅದೇ ನಮ್ಮ ಮನೆಯಲ್ಲಿ ಕಲವು ವರ್ಷಗಳ ಹಿಂದೆ ಪಾತ್ರೆ ಬಟ್ಟೆ ಕೆಲಸ ಮಾಡಿಕೊಡುತ್ತಿದ್ದವಳು. ನಮ್ಮ ಮನೆಯ ಕೆಲಸ ಬಿಟ್ಟರೂ ಸ್ನೇಹ ಬಿಟ್ಟಿಲ್ಲ. ನನ್ನ ನೆನಪಾದಾಗಲೆಲ್ಲ 'ಎಂಗಿದಿರಿ ಅವ್ವಾವ್ರೆ' ಅಂತ ಹಣಕು ಹಾಕುತ್ತಿರುತ್ತಾಳೆ. ಸರಿ ಬಂದಳು ಬೆಳಗಿನ ತಿಂಡಿ ಸಮಯ ಅವಳಿಗೂ ಒಂದಿಷ್ಟು ತಿಂಡಿ ಎಲೆಯ ಮೇಲೆ ಹಾಕಿಕೊಟ್ಟು ನಾವೂ ತಿಂಡಿ ತಿನ್ನುತ್ತಲೇ ಕ್ಷೇಮ ಸಮಾಚಾರ ಮಾತನಾಡಿದೆವು. ಅವಳು ಹಿಂದಿನ ವಾರವಷ್ಟೇ ತನ್ನ ಎರಡನೆ ಮಗಳ ಮದುವೆ ಮಾಡಿ ಮುಗಿಸಿ ಕರ್ತವ್ಯ ಮುಗಿಸಿದ ತೃಪ್ತಿಯಿಂದ ಬೀಗುತ್ತಿದ್ದಳು. ಅವಳ ಗಂಡ ಕುಡುಕ ಅಲ್ಲದೆ ಆರೇಳು ಹೆಂಡಿರ ಸರದಾರ ಬೇರೆ. ಸ್ವಂತಕ್ಕೆ ಒಂದೂ ಉದ್ಯೋಗವಿಲ್ಲದವನು. ಹೆಂಡಿರ ಗಳಿಕೆಯನ್ನೆಲ್ಲಾ ತನ್ನದೇ ಎಂದು ಹಕ್ಕು ಚಲಾಯಿಸುವವನು. ಇಂಥ ಗಂಡನ್ನಿಟ್ಟುಕೊಂಡು ಮದುವೆ ಹೇಗೆ ಮಾಡಿದಳೋ ಕುತೂಹಲ ನನಗೆ. ಅವಳು ಹೇಳುತ್ತಾ ಹೋದಳು ನಾನು ಬೆರಗಾಗುತ್ತಾ ಹೋದೆ.

'ಅದೇನವ್ವಾ ಸರ್ಕಾರ ನಮಗೆಲ್ಲ ಮನೆಗಳ್ನ ಕೊಟ್ಟವ್ರಲ್ಲ ಅದನ್ನ ನಾಕು ಭಾಗ ಮಾಡ್ದೆ. ಒಂದು ಭಾಗ ಮೊದಲ್ನೆ ಮಗಳೂ ಅಳಿಯಂಗೆ ಕೊಟ್ಟೆ, ಇನ್ನೊಂದು ಭಾಗ ಈ ಹೊಸಾ ಅಳೀಮಯ್ಯಂಗೆ ಕೊಟ್ಟೆ ಉಳಿದಿದ್ದರಲ್ಲಿ ನಾನೂ ನನ್ನ ಗಂಡು ಮಕ್ಳೂ ಇದೀವಿ. ಯಜಮಾನ ಆಗೀಗ ಬರ್‍ತಾ ಓಯ್ತಾ ಇರ್‍ತಾನೆ' 'ಭೇಷ್ ಹಾಲಮ್ಮ ಯಾವ ಕಾಯ್ದೆ ಕಾನೂನು ಗೊತ್ತಿಲ್ದೆ ಇದ್ರೂ ಹೆಣ್ಣು ಮಕ್ಕಳಿಗೆ ಸಮನಾಗಿ ಆಸ್ತಿ' ಹಂಚಿದೀಯ' ಮೆಚ್ಚುಗೆ ಸೂಚಿಸಿದೆ. 'ಅದೆಲ್ಲಾ ನಂಗೊತ್ತಿಲ್ಲ ಕಣವ್ವಾ ಈ ಒಸಾ ಅಳೀಮಯ್ಯ ಮನೆ ಕೊಡ್‌ದಿದ್ರೆ ಮದ್ವೆಯಾಗಕಿಲ್ಲಾಂದ ಅದ್ಕೇ ಇವನೊಬ್ಬಿಗೇ ಯಾಕೆಂತ ನಾಕ್ ಭಾಗ ಮಾಡಿಸ್ದೆ'.

ಸರ್ಕಾರ ಕೊಟ್ಟಿದ್ದ ಚೂರು ಗುಡಿಸಲೇ ಆದರೂ ಹೆಣ್ಣು ಮಕ್ಕಳಿಗೆ ಸಮನಾಗಿ ಹಂಚಿದಳಲ್ಲ ಎಂದು ಸಂತೋಷಿಸಲೇ ಅಥವಾ ವರದಕ್ಷಿಣೆ ರೂಪದಲ್ಲಿ ಒತ್ತಾಯದಿಂದ ಅಳಿಯನೇ ಕಿತ್ತುಕೊಂಡದ್ದು ಎಂದು ಬೇಸರಿಸಲೇ ಎನ್ನುವ ಗೊಂದಲದಲ್ಲಿರುವಾಗಲೇ ಅವಳು ಮದುವೆ ಆಲ್ಬಂ ತೋರಿಸಿದಳು. ಈ ದುಡಿಮೆಯ ಜನರೂ ಹೇಗೆ ಹಂತ ಹಂತವಾಗಿ ಉಳ್ಳವರ ಸೋಗುಗಳನ್ನೇ ಅನುಸರಿಸುತ್ತಿದ್ದಾರೆ ಎಂದು ವ್ಯಥೆಯಾಯಿತು ಆಲ್ಬಂ ನೋಡಿ ! ತಮಾಷೆಯೆಂದರೆ ಫೋಟೋದಲ್ಲಿ ಒಬ್ಬರ ಮುಖವೂ ಸಹಜವಾಗಿರಲಿಲ್ಲ. ಎಲ್ಲರೂ ಹೆದರಿಕೊಂಡಂತಿತ್ತು.

'ಯಾಕೆ ಹಾಲಮ್ಮ ಎಲ್ಲರೂ ಹಿಂಗೆ ಮುಖ ಮಾಡಿದಾರೆ' ಎಂದೆ. ಈ ಬೆಂಗಳೂರಿನ ಜಾಣೆ ಹೇಳಿದಳು, 'ಅಯ್ಯೋ ನಮ್ಮ ನೆಂಟ್ರೆಲ್ಲ ಅಳ್ಳಿಯವರು ಕಣವ್ವಾ ಅವರಲ್ಲಿ ಕೆಲವರಂತೂ ಫೋಟೋ ಬೆಳಕು ಒಡೆದಾಗ ಕಿರುಚಿಕೊಂಡು ಓಡೇ ಬಿಟ್ರು. ಅವರೆಲ್ಲ ಶೇಷಣ್ಣನ ಗುರುತಿನ ಚೀಟಿ ಪಟಾಗೂ ತೆಗೆಸಿಕೊಂಡಿಲ್ಲವಂತೆ ಅದ್ಕೇ ಅಂಗೇಯ'.

ಮನೆ ಕೆಲಸಗಳನ್ನ ಮಾಡಿಕೊಂಡೇ ಲಕ್ಷ ರೂಪಾಯಿ ಖರ್ಚುಮಾಡಿ ಮನೆ ರೂಪದ ವರದಕ್ಷಿಣೆ ಕೊಟ್ಟು ಮದುವೆ ಮಾಡಿದ ಹಾಲಮ್ಮನ ಯಶಸ್ಸಿನ ದಾಖಲೆ ಆ ಫೋಟೋ ಆಲ್ಬಂ ಆಗಿತ್ತು.

ಆ ಹೊತ್ತಿಗೆ ಹಾಲಮ್ಮನ ತಿಂಡಿ ಮುಗಿದಿತ್ತು, ಅವಳು ಎಲೆ ಬಿಸಾಡಿ ಬರಲು ಹೊರಗೆ ಹೋದಳು. ನನ್ನ ಐದು ವರ್ಷದ ಪುಟ್ಟ ಮೊಮ್ಮಗಳು ಹಾಲಮ್ಮ ಎಲೆ ಇಟ್ಟುಕೊಂಡಿದ್ದ ಜಾಗದಲ್ಲಿ ನೀರಿನಿಂದ ಗೋಮ ಹಚ್ಚಿಬಿಟ್ಟಳು. ಅವರಮ್ಮ ಮಾಡಬಾರದನ್ನು ಅವಳು ಮಾಡುತ್ತಿರುವಂತೆ "ಏ ಏನ್ ಮಾಡ್ತಾ ಇದ್ದಿ'' ಎಂದು ಕಿರುಚಿದಳು. ಆ ಕಿರುಚುವಿಕೆಯನ್ನೂ ಲೆಕ್ಕಕ್ಕೆ ತಾರದೆ

# ಅನುಪಮ ವಿಜ್ಞಾನಿ ಡಾರತಿ

ಪ್ರೊ|| ಜೆ. ಲಕ್ಷ್ಮಣರಾವ್

ವಿಜ್ಞಾನಕ್ಕೆ ಮಹತ್ತರ ಕೊಡುಗೆಗಳನ್ನು ನೀಡಿರುವ ವಿಜ್ಞಾನಿ ಸಾಮಾನ್ಯವಾಗಿ ತನ್ನ ಜೀವನವನ್ನು ಸಂಪೂರ್ಣವಾಗಿ ವಿಜ್ಞಾನಕ್ಕೇ ಸಮರ್ಪಿಸಿಕೊಂಡಿರುವನಾದ್ದರಿಂದ ಅಂಥ ವಿಜ್ಞಾನಿ ಇತರ ವಿಷಯಗಳಲ್ಲಿ ಆಸಕ್ತಿ ವಹಿಸುವುದು ಕಷ್ಟಸಾಧ್ಯವೆನಿಸುತ್ತದೆ. ಆದರೆ ಪ್ರತಿಭಾವಂತ ವಿಜ್ಞಾನಿಗಳು ಅನೇಕ ವೇಳೆ ತಮ್ಮ ಸುತ್ತಲ ಸಮಾಜದ ಆಗುಹೋಗುಗಳನ್ನು ಎಚ್ಚರಿಕೆಯಿಂದ ಗಮನಿಸಿ ಅವಕ್ಕೆ ತೀವ್ರವಾಗಿ ಸ್ಪಂದಿಸಿದ್ದಾರೆ, ಮನುಕುಲದ ಭವಿಷ್ಯದ ಬಗ್ಗೆ ಕಳಕಳಿ ತೋರಿ ನ್ಯಾಯಕ್ಕಾಗಿ ಹೋರಾಡಿಯೂ ಇದ್ದಾರೆ. ಅಂಥ ಉನ್ನತ ಮಟ್ಟದ ಸಾಮಾಜಿಕ ಪ್ರಜ್ಞೆಯನ್ನು ಪ್ರದರ್ಶಿಸಿದ ವಿಜ್ಞಾನಿಗಳಲ್ಲಿ ಬ್ರಿಟಿಷ್ ರಸಾಯನ ವಿಜ್ಞಾನಿ ಡಾರತಿ ಕ್ರೊಪ್ರುಟ್ ಹಾಡ್ಜ್‌ಕಿನ್ ಪ್ರಮುಖರು, ನೊಬಲ್ ಪ್ರಶಸ್ತಿ ವಿಜೇತೆಯಾದ ಡಾರತಿ 1994ರ ಜುಲೈ 29 ರಂದು ನಿಧನ ಹೊಂದಿದರು.

ಡಾರತಿ 1910ರ ಮೇ 12ರಂದು ಕೈರೊ ನಗರದಲ್ಲಿ ಜನಿಸಿದರು. ಮಧ್ಯ ಪ್ರಾಚ್ಯದ ಪ್ರಾಚೀನ ಇತಿಹಾಸದಲ್ಲಿ ಆಸಕ್ತರಾಗಿದ್ದ ಜಾನ್ ಕ್ರೊಪುಟ್ ಆಕೆಯ ತಂದೆ, ಅವರು ಆಗ ಈಜಿಪ್ಟ್‌ನ ಶಿಕ್ಷಣ ಇಲಾಖೆಯಲ್ಲಿ ಕೆಲಸ ಮಾಡುತ್ತಿದ್ದರು, ಆಕ್ಸ್‌ಫರ್ಡ್‌ನ ಸಾಮರ್‌ವಿಲ್ ಕಾಲೇಜಿನಲ್ಲಿ ರಸಾಯನ ವಿಜ್ಞಾನವನ್ನು ಅಭ್ಯಾಸ ಮಾಡಿ ಪದವೀಧರೆಯಾದ ಡಾರತಿ ಕೇಂಬ್ರಿಜ್‌ಗೆ ತೆರಳಿ ಜೆ.ಡಿ. ಬರ್ನಾಲ್ ಅವರ ನೇತೃತ್ವದಲ್ಲಿ ಸ್ಫಟಿಕ ಶಾಸ್ತ್ರದಲ್ಲಿ ಸಂಶೋಧನೆ ನಡೆಸಿ ಡಾಕ್ಟರೇಟ್ ಡಿಗ್ರಿ ಪಡೆದರು. ಆಫ್ರಿಕನ್ ಅಧ್ಯಯನಗಳಲ್ಲಿ ವಿದ್ವಾಂಸರಾಗಿದ್ದ ಥಾಮಸ್ ಹಾಡ್ಜ್‌ಕಿನ್ ಅವರನ್ನು ಅವರು 1937ರಲ್ಲಿ ಮದುವೆಯಾದರು, ತರುವಾಯ ಅವರು ಡಾರತಿ ಕ್ರೊಪುಟ್ ಹಾಡ್ಜ್‌ಕಿನ್ ಆದರು.

ತಮ್ಮ ಡಾಕ್ಟರೇಟ್‌ಗಾಗಿ ಅವರು ಜಠರ ರಸದಲ್ಲಿರುವ ಪ್ರೊಟೀನ್ ಜೀರಕ ಎಂಜೈಮ್, ಪ್ಲೆಪ್ಸಿನ್

> **—ನೋಬೆಲ್ ಪ್ರಶಸ್ತಿ ವಿಜೇತೆ, ಬ್ರಿಟೀಷ್ ರಸಾಯನ ವಿಜ್ಞಾನಿ ಡಾರತಿ ಕ್ರೊಫುಟ್ ಹಾಡ್ಜ್‌ಕಿನ್ ನಿಧನ ಹೊಂದಿ ಇದೇ ಜುಲೈ 29 ಕ್ಕೆ ಒಂದು ವರ್ಷವಾಗುತ್ತದೆ. ಅವರ ನೆನಪಿಗೆ ಈ ಲೇಖನ—**

ಆಯ್ದುಕೊಂಡು ಅದರ ಎಕ್ಸ್‌ರೆ ವಿವರ್ತನ ನಮೂನೆಯನ್ನು ಪಡೆದು ಅಧ್ಯಯನ ನಡೆಸಿದರು. ನೂರಾರು ಅಥವಾ ಸಾವಿರಾರು ಪರಮಾಣುಗಳಿಂದಾದ ಬೃಹದಣುಗಳನ್ನು ಎಕ್ಸ್‌ರೇ ಸಹಾಯದಿಂದ ಪರೀಕ್ಷಿಸಿ ಅಣುಗಳ ರಚನೆಯನ್ನು ನಿರ್ಧರಿಸುವ ಇಂದಿನ ಅಧ್ಯಯನಗಳಿಗೆ ಅದು ನಾಂದಿಯಾಯಿತು. ಮುಂದೆ ಅವರು ಜೀವನದುದ್ದಕ್ಕೂ ಆ ಕ್ಷೇತ್ರದಲ್ಲಿ ಶ್ರಮವಹಿಸಿ ಕೆಲಸ ಮಾಡಿ

---

(ಹಿಂದಿನ ಪುಟದಿಂದ)
ಮಗು ತಾನು ಗೋಮಯ ಹಚ್ಚಿ ಸ್ಥಳದಲ್ಲಿ ಬಟ್ಟೆಹಾಕಿ ಒರೆಸುತ್ತಿತ್ತು, ಆ ಹೊತ್ತಿಗೆ ಒಳಬಂದ ಹಾಲಮ್ಮ ಬೆಕ್ಕಸಬೆರಗಾಗಿ 'ಅಯ್ಯೋ ನೀವ್ಯಾಕ್ರಮ್ಮ ಒರೆಸಿದ್ರೀ' ಅಂತ ಪರಿತಪಿಸಲಾರಂಭಿಸಿದಳು. "ಅಯ್ಯೋ ನೀವಾದ್ರೂ ಏಳ್‌ಬಾರ್‌ದಿತ್ತಾ ಅಮ್ಮಾವ್ರೆ ನಾನ್ ತಿಂದ್ ಜಾಗದ ಎಂಜಲನ್ನು ಈ ಅಮ್ಮಾರು ತೆಗೆದು ಬಿಟ್ರಲ್ಲ'' ಎನ್ನುವ ಅಪರಾಧಿ ಭಾವದ ಮಾತುಗಳನ್ನು ಆಡುತ್ತಲೇ ಇದ್ದಳು.

ಹಾಲಮ್ಮನ 'ಗುಡಿಸಲು ಹಂಚಿಕೊಟ್ಟೆ' ಎನ್ನುವ ಉದಾರತೆಯೊಂದಿಗಿನ ಮುಗ್ಧತೆ, ಅವಳ ಎಂಜಲು ತೆಗೆಯುವ ಮಗುವಿನ ಮುಗ್ಧತೆಯೊಂದಿಗಿನ ಉದಾರತೆ ಎರಡೂ ನಮ್ಮ ಬದುಕಿನೊಳಗೆ ನುಸುಳುವುದೇ ಇಲ್ಲವಲ್ಲ ಎನ್ನುವ ಭಾವ ನನ್ನೊಳಗೆ ತುಂಬಿ ಬೆರಗಾಗುತ್ತಾ ಕುಳಿತೆ.

ಮತ್ತೆಲ್ಲ ಮುಂದಿನ ಪತ್ರದಲ್ಲಿ

ನಿನ್ನ

**ಶತಭಿಷಾ**

ಒಂದಾದ ಮೇಲೊಂದರಂತೆ ಹಲವಾರು ಸಂಕೀರ್ಣ ಅಣುಗಳ ರಚನೆಯನ್ನು ನಿರ್ಧರಿಸಿದ್ದಾರೆ. ಜೀವ ವಿಜ್ಞಾನದಲ್ಲಿ ಅತಿ ಮುಖ್ಯವೆನ್ನಿಸಿರುವ ಅತ್ಯಂತ ಸಂಕೀರ್ಣ ಅಣುಗಳ ರಚನೆಗಳನ್ನು ಅವರು ಕಂಡು ಹಿಡಿದಿದ್ದಾರೆ. ಕೊಲೆಸ್ಟೆರಾಲ್, ಪೆನಿಸಿಲಿನ್, ವಿಟಮಿನ್ ಬಿ–12 ಮುಂತಾದವುಗಳ ರಚನೆಯನ್ನು ಅವರು ಕಂಡು ಹಿಡಿದುದು ಅಂದಿನ ರಸಾಯನ ವಿಜ್ಞಾನಿಗಳನ್ನು ದಂಗು ಬಡಿಸಿತು. ಕೇವಲ ಮೂವತ್ತೇಳನೆಯ ವಯಸ್ಸಿನಲ್ಲಿ ಅವರು ರಾಯಲ್ ಸೊಸೈಟಿಯ ಫೆಲೋ ಆಗಿ ಚುನಾಯಿತರಾದರು. 1964ರಲ್ಲಿ ಅವರಿಗೆ ರಸಾಯನ ಶಾಸ್ತ್ರದ ನೊಬೆಲ್ ಬಹುಮಾನ ಬಂದಿತು.

ಡಾರತಿ ಹಾಡ್ಜ್‌ಕಿನ್ ಶಿಕ್ಷಣ ಕ್ಷೇತ್ರದಲ್ಲಿ ತುಂಬ ಆಸಕ್ತಿ ವಹಿಸುತ್ತಿದ್ದರು. ಇಪ್ಪತ್ತು ವರ್ಷಗಳಿಗೂ ಹೆಚ್ಚು ಕಾಲ ಅವರು ಬ್ರಿಸ್ಟಲ್ ವಿಶ್ವವಿದ್ಯಾನಿಲಯದ ಚಾನ್ಸಲರ್ ಆಗಿದ್ದರು. ಜನಸಾಮಾನ್ಯರಿಗೆ ವಿಜ್ಞಾನದ ಪರಿಚಯ ಮಾಡಿಕೊಡುವುದು ಅವರ ದೃಷ್ಟಿಯಲ್ಲಿ ಬಹುಮುಖ್ಯವೆನಿಸಿತ್ತು. ಬ್ರಿಟಿಷ್ ಅಸೋಸಿಯೇಷನ್ಸ್ ಫಾರ್ ದಿ ಅಡ್ವಾನ್ಸ್‌ಮೆಂಟ್ ಆಫ್ ಸೈನ್ಸ್‌ನ ಅಧ್ಯಕ್ಷರಾಗಿದ್ದರು. ಬ್ರಿಟೀಷ್ ಪ್ರಜೆಗೆ ದೊರಕುವ ಅತ್ಯುನ್ನತ ಪ್ರಶಸ್ತಿ 'ಆರ್ಡರ್ ಆಫ್ ಮೆರಿಟ್'ಗೆ 1965ರಲ್ಲಿ ಅವರನ್ನು ಆಯ್ಕೆ ಮಾಡಿದಾಗ ಅದಕ್ಕೂ ಹಿಂದೆ ಆ ಪ್ರಶಸ್ತಿ ಪಡೆದ ಏಕೈಕ ಮಹಿಳೆ ಫ್ಲಾರೆನ್ಸ್ ನೈಟಿಂಗೇಲ್ ಆಗಿದ್ದರು.

ಡಾರತಿ ಹಾಡ್ಜ್‌ಕಿನ್ ಮಹಾ ಮಾನವತಾವಾದಿ. ಜಗತ್ತಿನ ಎಲ್ಲ ರಾಷ್ಟ್ರ ವಿಮೋಚನಾ ಚಳುವಳಿಗೂ ಅವರು ಬೆಂಬಲ ವ್ಯಕ್ತಪಡಿಸಿದ್ದರು. ಪರಮಾಣು ಅಸ್ತ್ರಗಳ ನಿಷೇಧ ಮತ್ತು ಅಂತರ ರಾಷ್ಟ್ರೀಯ ಸಹಕಾರಗಳಿಗೆ ಬೆಂಬಲ ನೀಡುವ ಉದ್ದೇಶದಿಂದ ಬರ್ಟ್ರೆಂಡ್ ರಸೆಲ್ ಅವರು ಸಂಘಟಿಸಿದ ಪಗ್ವಾಷ್ ಸಮ್ಮೇಳನಗಳಲ್ಲಿ ಅವರು ತಪ್ಪದೇ ಭಾಗವಹಿಸುತ್ತಿದ್ದರು. 1976ರಲ್ಲಿ ಅದರ ಅಧ್ಯಕ್ಷೆಯಾಗಿ ಚುನಾಯಿತರಾಗಿ ಹಲವಾರು ವರ್ಷಕಾಲ ಆ ಸ್ಥಾನದಲ್ಲಿದ್ದರು.

ಭಾರತಕ್ಕೂ ಅವರಿಗೂ ನಂಟು. ಹಲವು ಬಾರಿ ಅವರು ನಮ್ಮ ದೇಶಕ್ಕೆ ಬಂದಿದ್ದಾರೆ. 1973ರಲ್ಲಿ ಅವರು ಮೌಲಾನಾ ಅಜಾದ್ ಸ್ಮಾರಕ ಉಪನ್ಯಾಸವನ್ನು ನೀಡಿದರು. ಇಂಡಿಯನ್ ಅಕಾಡೆಮಿ ಆಫ್ ಸೈನ್ಸ್‌ನ ರಾಮನ್ ಪ್ರಾಧ್ಯಾಪಕ ಪೀಠವನ್ನು ಅವರು ಅಲಂಕರಿಸಿದ್ದರು. ಭಾರತೀಯ ವಿಜ್ಞಾನ ಸಂಸ್ಥೆಯ ನಿರ್ದೇಶಕರಾಗಿದ್ದ ಡಾ॥ ಎಸ್, ರಾಮಶೇಷನ್ ಅವರೂ ಸೇರಿದಂತೆ ಏಳೆಂಟು ಮಂದಿ ಭಾರತೀಯರು ಅವರ ಪ್ರಯೋಗಾಲಯದಲ್ಲಿ ಅವರ ನೇತೃತ್ವದಲ್ಲಿ ಕೆಲಸ ಮಾಡಿದ್ದಾರೆ. ಅವರಲ್ಲೊಬ್ಬರಾದ ಭಾರತೀಯ ವಿಜ್ಞಾನ ಸಂಸ್ಥೆಯ ಪ್ರಾಧ್ಯಾಪಕ ಪ್ರೊ. ವಿಜಯನ್, ಡಾರತಿಯವರ ಮಾನವೀಯತೆ, ಸರಳ ಸಜ್ಜನಿಕೆಗಳನ್ನು ಕುರಿತು ಬರೆಯುತ್ತ 'ಆ ಮಟ್ಟದ ವಿಜ್ಞಾನಿಗಳಲ್ಲಿ ಅಪರಂತ ಎಲ್ಲರ ಗೌರವಕ್ಕೆ ಪಾತ್ರರಾದವರು ಹಲವರಿದ್ದಾರೆ, ಅಪರಂತೆ ಎಲ್ಲರ ಪ್ರೀತಿಗೆ ಪಾತ್ರರಾದವರು ಪ್ರಾಯಶಃ ಇನ್ನೊಬ್ಬರಿಲ್ಲ' ಎಂದಿದ್ದಾರೆ.

**ಕೃಪೆ : ವಿದ್ಯಾರ್ಥಿ ಸಂಕಲ್ಪ**

---

ಸ್ತ್ರೀವಾದಿ ಪ್ರಜ್ಞೆಯು ವರ್ಗಭೇದ, ಸಾಂಸ್ಕೃತಿಕ ಅಂತರ, ಜನಾಂಗ ವ್ಯತ್ಯಾಸ, ರಾಷ್ಟ್ರಗಳ ನಡುವಿನ ಅಂತರಗಳನ್ನು ಮೀರಿ ವ್ಯಾಪಿಸಿರುವಂಥ ಅಂತಾರಾಷ್ಟ್ರೀಯ ಸ್ವರೂಪವನ್ನು ಪಡೆದಿದೆ. ಈ ಸಂಬಂಧಗಳ ಬಗ್ಗೆ ಮಹಿಳೆಯರಿಗೆ ಇರುವ ಅರಿವು, ರಾಜಕೀಯ ಹೋರಾಟಗಳಿಂದ ಅವರು ಗಳಿಸಿರುವ ಶಕ್ತಿ ಹಾಗೂ ಅವರ ಪರಿಸರದಲ್ಲಿ ಕ್ರಿಯಾಶೀಲವಾಗಿರುವ ಇತರ ಸಾಮೂಹಿಕ ಹೋರಾಟಗಳು ಮುಂತಾದವು ಸ್ತ್ರೀವಾದಿ ಹೋರಾಟಗಳನ್ನು ಪ್ರಭಾವಿಸಿರುತ್ತವೆ.

'ಸ್ತ್ರೀವಾದಿ ಪ್ರವೇಶಿಕೆ' ಇಂದ ಸಂಪಾದಕಿಯರು

# 'ವಿಚಯ'ದ ಪರಿಚಯ

—ಸ. ಉಷಾ



ವಿಚಯವನ್ನು ಪರಿಚಯ ಮಾಡಿಕೊಡುವುದು ನನಗೆ ಸಂತೋಷದ ಮತ್ತು ಗೌರವದ ವಿಷಯ.

ವಿಚಯ ಎಂಬ ಮಾತಿಗೆ ಶೋಧನೆ ಹುಡುಕಾಟ ಕೂಡಿಸುವುದು ಎಂಬ ಅರ್ಥಗಳಿವೆ. ಒಂದೊಂದು ಸಾರಿ ಒಂದು ಪದ ತನ್ನ ನಿಘಂಟುವಿನ ಅರ್ಥವನ್ನು ಮೀರಿ ಜನಪದದ ಭಾವಕೋಶದಲ್ಲಿ ಬೆಳೆಯುತ್ತದೆ. ಸಂಸ್ಕೃತದ ಪ್ರಾಚಾರ್ಯ, ಕನ್ನಡದ ಅಪರೂಪ ಎಂಬ ಪದಗಳು ಬೆಳೆದ ಹಾಗೆ.

ಹಾಗೆ ವಿಚಯ ಎಂದು ಕಿವಿಗೆ ಕೇಳಿದ ತಕ್ಷಣ ಅದು ಸಂಚಯಕ್ಕೆ ವಿರುದ್ಧವಾದುದೇನೋ- ಚದುರಿಸುವಂಥದೇನೋ ಎಂಬ ಭಾವ ಸ್ಫುರಿಸುತ್ತದೆ. ಡಾ. ಬಿ. ಎನ್. ಸುಮಿತ್ರಾಬಾಯಿಯವರ 'ವಿಚಯ' ಎರಡರ್ಥದಲ್ಲಿ ವಿಚಯವೇ ಆಗಿದೆ. ಅದು ಕನ್ನಡ ಸಾಹಿತ್ಯದ ಒಂದು ಸ್ತ್ರೀವಾದಿ ಅಧ್ಯಯನವಾಗಿ "ಕನ್ನಡದ ಮಹಿಳಾ ಸಾಹಿತ್ಯ ಮತ್ತು ಸ್ತ್ರೀತ್ವದ ಶೋಧನೆ''ಯನ್ನು ನಡೆಸಿದೆ. ಈ ವರೆಗೆ ಸಾಹಿತ್ಯ ಮತ್ತು ವಿಮರ್ಶೆಯಲ್ಲಿ ಪ್ರಚಲಿತವಾದ ಕೆಲವು ಗ್ರಹಿಕೆಗಳನ್ನು ಚದುರಿಸಿಯೂ ಹಾಕಿದೆ.

ಸ್ತ್ರೀವಾದ ಎಂಬ ಮಾತು ಈಚೆಗೆ ಬಹು ಚರ್ಚಿತವಾಗಿದೆ. ಕರ್ನಾಟಕ ಅಥವಾ ಭಾರತದಲ್ಲಷ್ಟೇ ಅಲ್ಲದೆ ಜಾಗತಿಕವಾಗಿಯೂ ಸ್ತ್ರೀವಾದ ಒಂದು ಆಸಕ್ತಿಪೂರ್ಣ ವಿಷಯವಾಗಿದೆ. ಪ್ರಪಂಚದ ಚಿತ್ರ ಬದಲಾಗುತ್ತಿದೆ. ಸ್ತ್ರೀವಾದ ಕಪ್ಪುಸಾಹಿತ್ಯ, ತೃತೀಯ ವಿಶ್ವದ ಚಿಂತನೆಗಳು ಜಾಗತಿಕ ಆಸಕ್ತಿಯ ವಿಷಯಗಳಾಗಿವೆ ಎನ್ನುವುದನ್ನು ಈಗಾಗಲೇ ಗುರುತಿಸಲಾಗಿದೆ. ಸ್ತ್ರೀವಾದ ಎಂದರೇನು ಎಂಬ ತಾತ್ವಿಕ ಜಿಜ್ಞಾಸೆಗೆ ನಾನಿಲ್ಲಿ ಹೋಗುವುದಿಲ್ಲ. ಸ್ತ್ರೀವಾದ ಮಾಡುವ ಕೆಲಸವೇನು ಎಂಬುದನ್ನು ಡಾ. ಸುಮಿತ್ರಾಬಾಯಿ ಅವರು ಭಾವಾನುವಾದ ಮಾಡಿರುವ ಸಿಮೋನ್‌ದ ಬೋವಾಳ ಸೆಕೆಂಡ್‌ಸೆಕ್ಸ್ ಪುಸ್ತಕದಲ್ಲಿರುವ "ದ ಇಂಡಿಪೆಂಡೆಟ್ ವಿಮೆನ್'' ಎಂಬ ಲೇಖನದ ಕೊನೆಯ ಸಾಲು ಸ್ತ್ರೀವಾದ ಮಾಡುವ ಕೆಲಸವೇನು ಎಂಬುದನ್ನು ಸೊಗಸಾಗಿ ಹೇಳಿದೆ.

> **ದಿನಾಂಕ 16-7-95ನೇ ಭಾನುವಾರ ಬೆಳಿಗ್ಗೆ 10-30ಕ್ಕೆ ಬೆಂಗಳೂರಿನ ಮಿಥಿಕ್ ಸೊಸೈಟಿಯ ಸಭಾಂಗಣದಲ್ಲಿ ಇಳಾ ಪ್ರಕಾಶನ ಮತ್ತು ಜಾಗೃತಿ ಮಹಿಳಾ ಅಧ್ಯಯನ ಕೇಂದ್ರದ ಸಂಯುಕ್ತಾಶ್ರಯದಲ್ಲಿ ಡಾ. ಸುಮಿತ್ರಾಬಾಯಿಯವರ 'ವಿಚಯ' ಗ್ರಂಥ ಬಿಡುಗಡೆಯಾಯಿತು. ಈ ಸಮಾರಂಭದ ಅಧ್ಯಕ್ಷತೆಯನ್ನು ಡಾ. ಜ್ಯೋತ್ಸ್ನಾ ಕಾಮತ್‌ರವರು ವಹಿಸಿದ್ದರು. ಡಾ. ವಿವೇಕ್ ರೈರವರು ಗ್ರಂಥವನ್ನು ಬಿಡುಗಡೆ ಮಾಡಿದರು. ಶ್ರೀಮತಿ ಸ. ಉಷಾರವರು ಗ್ರಂಥವನ್ನು ಕುರಿತು ಮಾತನಾಡಿದರು.**
>
> **'ವಿಚಯ'ದ ಬಗ್ಗೆ ಸ. ಉಷಾರವರ ಅನಿಸಿಕೆಗಳು ಲೇಖನ ರೂಪದಲ್ಲಿ ಈಗ ನಿಮ್ಮ ಮುಂದೆ.**

"ಇಂದಿನವರೆಗೆ ಮಹಿಳೆಯ ವಿಕಾಸದ ಸಾಧ್ಯತೆಗಳು ಹತ್ತಿಕ್ಕಲ್ಪಟ್ಟಿವೆ. ಆದ್ದರಿಂದ ಮಾನವ ಜನಾಂಗಕ್ಕೆ ಆ ಸಾಧ್ಯತೆಗಳು ಇಲ್ಲವಾಗಿವೆ, ಆಕೆ ತನ್ನದೇ ಆಸಕ್ತಿಯನ್ನು ರೂಢಿಸಿಕೊಂಡು ಆ ಮೂಲಕ ಎಲ್ಲರ ಹಿತಾಸಕ್ತಿಯನ್ನು

ಕಂಡುಕೊಳ್ಳಬೇಕಾದ ಕಾಲ ಸಮೀಪಿಸಿದೆ''

ಈ ಮಾತನ್ನು ಹೇಳಿದ ತಕ್ಷಣ "ಎಲ್ಲರ ಹಿತಾಸಕ್ತಿಯನ್ನು ಕಂಡುಕೊಳ್ಳಲು ಸ್ತ್ರೀವಾದವೆಂಬ ಹೆಸರು ತಾತ್ವಿಕತೆ, ಪ್ರತ್ಯೇಕತೆ ಏಕೆ ಬೇಕು'' ಎಂದು ಪ್ರಶ್ನಿಸುವವರೂ ಇಲ್ಲದಿಲ್ಲ, ಮಹಿಳಾ ಸಾಹಿತ್ಯ, ಮಹಿಳಾ ವಿಮರ್ಶೆ ಅನಗತ್ಯವೆಂದು ಹೇಳುವವರಿಗೆ ವಿಜಯ ಕೊಡುವ ಉತ್ತರವಿದು.

"ಮಹಿಳಾ ಸಾಹಿತ್ಯ ಮಹಿಳಾ ವಿಮರ್ಶೆ ಎಂಬ ಪ್ರತ್ಯೇಕತೆಯನ್ನು ಅನಗತ್ಯವೆಂದು ಹೇಳುತ್ತ ಇಂಥ ವಾಗ್ರೂಪದ ನಿರಾಕರಣೆಯ ಮೂಲಕವೇ ವಸ್ತು ಸ್ಥಿತಿಯನ್ನು ಬದಲಾಯಿಸಿ ಬಿಡಬಹುದು ಎಂಬ ದಾರ್ಷ್ಟ್ಯ ನನಗಿಲ್ಲ. ಬದಲಾಗಿ ತನ್ನ ಬಗ್ಗೆ ಪರಿಸರದ ಬಗ್ಗೆ ತನ್ನಂಥ ಇತರರ ಬಗ್ಗೆ ತೀವ್ರ ಅರಿವನ್ನು ಪಡೆದುಕೊಳ್ಳಲು. ತನ್ನ ಸಹಜ ಸ್ಥಾನವನ್ನು ಸಾಮಾಜಿಕ ರಾಜಕೀಯ ಆರ್ಥಿಕ ನೆಲೆಗಳಲ್ಲಿ ಕಂಡು ಕೊಳ್ಳುವ ಮೂಲಕ ಮಾತ್ರ 'ಪ್ರಧಾನ' 'ಅಪ್ರಧಾನ' ಎಂಬ ವೈಪರೀತ್ಯಗಳಿಂದ ಮುಕ್ತವಾದಂಥ ಸಾಹಿತ್ಯವನ್ನು ಸೃಷ್ಟಿಸಲು ಸಾಧ್ಯ ಎಂದು ನಂಬುವವಳು ನಾನು. ಆದ್ದರಿಂದ ಭಾಷೆಯೂ ಒಂದು ಅಧಿಕಾರದ ಸಾಧನವಾಗಿದ್ದು ಭಾಷೆಯಲ್ಲಿ ತನ್ನನ್ನು ಅಭಿವ್ಯಕ್ತಿಸಿಕೊಳ್ಳುವುದೆಂದರೆ ತನ್ನದೇ ಆದ ಭಾಷೆಯೊಂದನ್ನು ಸೃಷ್ಟಿಸಿಕೊಳ್ಳಬೇಕಾದ ಅನಿವಾರ್ಯತೆಯನ್ನು ಸ್ವೀಕರಿಸಿದಂತೆ. ಈ ಕ್ರಿಯೆಗಾಗಿ ಪ್ರಚಲಿತ ಭಾಷೆಯಲ್ಲಿನ ಪ್ರತೀಕಗಳು ಶಬ್ದರೂಪಾವಳಿಗಳು. ಪುರಾಣಿಕ ಪ್ರತಿಮೆಗಳ ಭಂಜನೆ ಅನಿವಾರ್ಯ, ಈ ಭಂಜನೆಯ ಕಾರ್ಯಕೂಡಾ ಸ್ವಂತದ ಅರಿವಿನ ಕಡೆಗೆ ಸಾಗುವ ಯತ್ನವಾಗಿರುತ್ತದೆ ಎಂದು ನಾನು ಭಾವಿಸಿದ್ದೇನೆ.'' ಪು. 114.

ಇದೇನೂ ಹೊಸ ವಿಚಾರವಲ್ಲ ಕಾಲದಿಂದ ಕಾಲಕ್ಕೆ ಸಾಹಿತ್ಯದಲ್ಲಿ ಬೇರೆ ಬೇರೆ ಚಳುವಳಿಗಳು ಈ ಭಂಜನೆಯ ಕೆಲಸವನ್ನು ಮಾಡಿವೆ. ಆ ಇತಿಹಾಸ ಸಾಹಿತ್ಯದ ರೂಪದಲ್ಲೇ ನಮ್ಮೆದುರಿಗಿದೆ, ನವೋದಯದವರು ಪ್ರಾಚೀನ ಸಾಹಿತ್ಯದ ಪ್ರತಿಪಾದಕರಿಗೆ, ಪ್ರಾಸ ಬಿಟ್ಟವರುಪ್ರಾಸ ಬಿಡದವರಿಗೆ ನವ್ಯರು ನವೋದಯದವರಿಗೆ ಬಂಡಾಯ-ದಲಿತ ಸಾಹಿತ್ಯದವರು ಕಟ್ಟಾನವ್ಯರಿಗೆ ಈ ಮಾತನ್ನು ಬೇರೆಯ ಭಾಷೆಯಲ್ಲಿ ಹೇಳಿದರು ಮಹಿಳಾ ಸಾಹಿತ್ಯದ ಮಾತು ಬಂದಾಗ 'ಪ್ರಧಾನ' ಅಪ್ರಧಾನ' 'ಅಧೀನ' ಎಂಬ ಮಾತುಗಳು ಬರುತ್ತವೆ. ಇರಲಿ ಬಿಡಿ.

"ನೊಂದವರ ನೋವ ನೋಯದವರೆತ್ತ ಬಲ್ಲರು'' ಎಂದು ಮಹಾದೇವಿಯಕ್ಕ ಆ ಕಾಲದಲ್ಲಿ ಹೇಳಿದ ಮಾತು ಇಂದಿಗೂ ಸತ್ಯವೇ.

ವಿಜಯ ಈ ಭಂಜನೆಯ ಕೆಲಸವನ್ನು ಮತ್ತು ಶೋಧನೆಯ ಕೆಲಸವನ್ನು ಹೇಗೆಮಾಡಿದೆ ಎಂಬುದನ್ನು ನಾನು ಗ್ರಹಿಸಿರುವ ರೀತಿಯಲ್ಲಿ ನಿಮ್ಮೆದುರಿಗಿಡುತ್ತೇನೆ.

ವಿಜಯವಲ್ಲಿ ಮೂರು ಭಾಗಗಳಿವೆ. ಮೊದಲ ಭಾಗದಲ್ಲಿ "ಮಹಿಳೆ ಮತ್ತು ಸೃಜನಶೀಲ ಸಾಹಿತ್ಯ'' ಕನ್ನಡದ ಮಹಿಳಾ ಸಾಹಿತ್ಯ ಮತ್ತು ಸ್ತ್ರೀತ್ವದ ಶೋಧನೆ ತರಹದ ತಾತ್ವಿಕ ಲೇಖನಗಳೊಡನೆ "ಕನ್ನಡ ಸಾಹಿತ್ಯ ಒಂದು ಸ್ತ್ರೀಪರ ದೃಷ್ಟಿ'' ಯಂಥ ತೌಲನಿಕ ದೃಷ್ಟಿಯ ಲೇಖನಗಳೂ ಇವೆ. ಈ ಭಾಗ ಮುಂದೆ ಹೇಳಬೇಕಾಗಿರುವ ಪ್ರಾಯೋಗಿಕ ವಿಮರ್ಶೆ ಮತ್ತು ಮಾಡಲಿರುವ ಸಿದ್ಧಾಂತಗಳಿಗೆ ತಾತ್ವಿಕ ಪೀಠಿಕೆಯೂ ಆಗಿದೆ.

"ಕನ್ನಡ ಸಾಹಿತ್ಯ ಒಂದು ಸ್ತ್ರೀಪರ ದೃಷ್ಟಿ'' ಎಂಬ ಲೇಖನ ಈ ಭಾಗದಲ್ಲಿ ವಿಶೇಷ ಉಲ್ಲೇಖವನ್ನು ಬಯಸುತ್ತದೆ. ಇದರಲ್ಲಿ ಧಾರ್ಮಿಕ ನೆಲೆಯಿಂದ ಬಂದ ಮೌಲ್ಯಗಳು ಸ್ತ್ರೀಯನ್ನು ಬದುಕಿನ ಎಲ್ಲ ಹಂತಗಳಲ್ಲೂ ಪುರುಷನ ಅಧೀನವಾಗಿರಿಸಿ ಆಕೆಯ ಸ್ವತಂತ್ರ ಅಸ್ತಿತ್ವವನ್ನು ಸ್ವತಂತ್ರ ಜೀವನೋಪಾಯವನ್ನು ನಿರಾಕರಿಸಿದವು. ಇದನ್ನೇ ಕಾವ್ಯವೂ ತಲೆಮಾರಿನಿಂದ ತಲೆಮಾರಿಗೆ ದಾಟಿಸಿತು ಎಂದು ಹೇಳುತ್ತಾ, ಪಂಪ, ಕಾಳಿದಾಸರು ನವವಧುವಿಗೆ ಬುದ್ಧಿ ಹೇಳುವ ಪ್ರಸಂಗಗಳನ್ನು ಉದಾಹರಿಸಿ.

"ಕಾಳಿದಾಸನ ಧರ್ಮವೂ ಅದ್ವೈತ ದರ್ಶನವೂ ಪಂಪನ ಜೈನಧರ್ಮದ ಸರ್ವಜೀವ ಸಮಾನತೆಯ ತತ್ವವೂ ತಾತ್ವಿಕ ನೆಲೆಗಳಲ್ಲಿ ದೊಡ್ಡ ಕಾವ್ಯಗಳಿಗೆ ಪ್ರೇರಣೆಯನ್ನು ನೀಡಿರಲೊಲ್ಲವೇಕೆ ? ವಾಸ್ತವ ಬದುಕಿನ ನೆಲೆಯಲ್ಲಿ ಅವರು ಪುರುಷರಿಗೆ ಅನುಕೂಲಕರವಾಗಿದ್ದ ಮೌಲ್ಯಗಳನ್ನು ಯಾವುದೇ ತಾತ್ವಿಕ ಭಿನ್ನತೆಯಿಲ್ಲದೆ ಮುಂದು ವರೆಸಬಲ್ಲರು'' ಎನ್ನುತ್ತಾರೆ. ಇದೇ ರೀತಿ ವಿಮುಕ್ತ ಸ್ತ್ರೀ ಚೇತನದ ಪ್ರತೀಕವೆಂದು ಗುರುತಿಸಲ್ಪಡುವ ಮಹಾದೇವಿಯಕ್ಕ ಶರೀರವನ್ನು ನರಕಹೇತುವೆನ್ನುವ ಸಾಂಪ್ರದಾಯಿಕ ವೈರಾಗ್ಯದ ಕಲ್ಪನೆಯನ್ನು

ಸ್ವೀಕರಿಸಿರುವುದರ ಬಗ್ಗೆ, ಕಾವ್ಯನಾಟಕಗಳಲ್ಲಿ ವರ್ಣನೆಗಳು ನಾಯಿಕೆಯರ ಕಲ್ಪನೆಗಳು ಇವುಗಳ ಬಗ್ಗೆ ಸುಮಿತ್ರಾ ಅವರು ಶೋಧವನ್ನು ಮುಂದುವರಿಸಿದ್ದಾರೆ. ನವೋದಯ ಕಾಲದಿಂದ ಹಿಡಿದು ನವ್ಯೋತ್ತರ ಕಾಲದವರೆಗಿನ ಕೆಲವು ಪ್ರಮುಖ ಕಾದಂಬರಿಗಳನ್ನು ಈ ಲೇಖನದಲ್ಲಿ ಶೋಧಕ್ಕೆ ಗುರಿಪಡಿಸಿದ್ದಾರೆ.

ನಿರ್ದಿಷ್ಟ ಕೃತಿಗಳನ್ನು ಆಯ್ದುಕೊಂಡು ಈವರೆಗಿನ ವಿಮರ್ಶೆಗಿಂತ ಭಿನ್ನವಾದ ಶೋಧವನ್ನು ಮಾಡಿರುವ ಈ ಲೇಖನಗಳು ನನಗೆ ತುಂಬ ಮಹತ್ವದವಾಗಿ ಕಾಣುತ್ತವೆ. ಇವುಗಳಲ್ಲಿ ಕಹಿ ಇಲ್ಲ, ಆಕ್ರೋಶವಿಲ್ಲ, ಮಹಿಳೆ ಬರೆದುದೆಲ್ಲವೂ ಶ್ರೇಷ್ಠ ಎಂಬ ಭ್ರಮೆಯೂ ಇಲ್ಲ, ಪರಂಪರೆಯನ್ನು ಸರಿಯಾಗಿ ಗ್ರಹಿಸುವ, ಸಾಹಿತ್ಯಕ್ಕೆ ನ್ಯಾಯ ಒದಗಿಸುವ ಕಳ ಕಳಿ ಇದೆ.

'ಸ್ವಾತಂತ್ರ್ಯ ಪೂರ್ವದ ಅವರು ಕನ್ನಡ ಲೇಖಕಿಯರು' ಎಂಬ ಲೇಖನದಲ್ಲಿ ಕಲ್ಯಾಣಮ್ಮ ಮತ್ತು ತಿರುಮಲಾಂಬಾ ಅವರಿಗೆ ಬಹುಕಾಲದ ನಂತರ ಸಾಹಿತ್ಯ ಸಲ್ಲಿಸಬೇಕಾದ ಗೌರವವನ್ನು ಸಲ್ಲಿಸಿರುವ ಸುಮಿತ್ರಾ ಅವರು ಸ್ವತಃ ಮಹಿಳಾ ಬರಹಗಾರರೂ ವಿಮರ್ಶೆಯ ಗೃಹೀತಗಳನ್ನು ಒಪ್ಪಿ ಬರೆಯುವುದರ ವಿರುದ್ಧ ಗಂಭೀರವಾಗಿ ದನಿ ಎತ್ತಿದ್ದಾರೆ.

'ಇಂಥ ಪರಂಪರೆಯೊಂದು ತಮಗಿತ್ತು ತಾವು ಪರಂಪರೆಯ ಹಿರಿಯರಿಂದ ಕಲಿತು ವಿಸ್ತರಿಸಬೇಕಾದ್ದು ಇದೆ ಎಂಬ ಅರಿವು ಮುಂದಿನ ಲೇಖಕಿಯರಲ್ಲಿ ಇಲ್ಲದೇ ಹೋದದ್ದು ವಾಸ್ತವದಲ್ಲಿ ಮಹಿಳೆಯರ ಕಥಾ ಸಾಹಿತ್ಯ ದುರ್ಬಲವೂ ಪೇಲವವೂ ಆದ ಸರಕು ಎಂಬ ಭಾವನೆ ಬೇರೂರಲು ಕಾರಣವಾಗಿರಬೇಕು. ಆದ್ದರಿಂದಲೇ ಸತ್ವದ ಅರಿವು ಲೇಖಕಿಯರಲ್ಲಿ ನವ್ಯದ ಅವಧಿಯಿಂದ ಮಾತ್ರ ತಲೆದೋರಿತು ಎಂಬ ಅರೆಸತ್ಯದ ಅಭಿಪ್ರಾಯಗಳನ್ನು ಕಣ್ಣುಮುಚ್ಚಿ ಎದುರಿಸುತ್ತಾ ಹೋಗುವ ಪ್ರವೃತ್ತಿ ಇನ್ನೂ ನವ್ಯ ಮತ್ತು ನವ್ಯ ಪ್ರಭಾವಿತ ವಲಯಗಳಲ್ಲಿ ಉಳಿದಿದೆ',

ನವೋದಯ ಲೇಖಕಿಯರನ್ನು ಸಾರಾಸಗಟಾಗಿ 'ಪರಂಪರಾಗತ ಭಾರತೀಯ ಸಂಸ್ಕೃತಿಯ ನೆರಳಿನಲ್ಲಿ' ಬರೆದವರೆಂದು ಅವರ ಗೋಣಗಾಟಗಳು 'ಪಿಸುದನಿಯ ಮಟ್ಟಕ್ಕಿಂತ' ಮೇಲೆ ಏರಲೇ ಇಲ್ಲವೆಂದು ಹೇಳುವ ವಿಮರ್ಶೆಯ ಗೃಹೀತಗಳನ್ನು ಸುಮಿತ್ರಾ ಚದುರಿಸುತ್ತಾರೆ. ನವೋದಯ ಲೇಖಕಿಯರಲ್ಲಿ ತಿರುಮಲಾಂಬಾ ಸಾವಿತ್ರಮ್ಮನವರಲ್ಲದೆ ಶ್ಯಾಮಲಾದೇವಿ, ಕೊಡಗಿನ ಗೌರಮ್ಮ, ಬೆಳಗೆರೆ ಜಾನಕಮ್ಮ ಮುಂತಾದ ಅನೇಕ ಲೇಖಕಿಯರಿದ್ದಾರೆ. ಅವರೆಲ್ಲರೂ ತಮ್ಮ ಕಾಲದ ಸಾಮಾಜಿಕ ಸಮಸ್ಯೆಗಳಿಗೆ ಸ್ತ್ರೀಯರ ದೃಷ್ಟಿಯಿಂದ ತೀವ್ರವಾಗಿ ಸ್ಪಂದಿಸಿದವರು. ಪ್ರಕಾಶನ ಸ್ತ್ರೀ ಶಿಕ್ಷಣಗಳಲ್ಲಿ ದುಡಿದವರು. 'ಇಂಥ ಕ್ರಿಯಾಶೀಲ ಸ್ಪಂದನೆ ಸಮಾಜ ಬದುಕು ಬರಹಗಳನ್ನು ಇಂದಿನ ಲೇಖಕಿಯರಿಗೆ ಇನ್ನೂ ದಕ್ಕಬೇಕಾದ್ದಿದೆ ಎಂಬುದು ಐತಿಹಾಸಿಕ ವಾಸ್ತವಾಂಶ' ಎಂದು ಒಂದು ನಿರ್ಲಕ್ಷಿತ ಸತ್ಯವನ್ನು ದಾಖಲಿಸಿದ್ದಾರೆ.

ಮೂರನೆಯ ಭಾಗದಲ್ಲಿ 'ಮಾಸ್ತಿಯವರ ಸ್ತ್ರೀ ಪಾತ್ರಗಳು'. 'ಕಾರಂತರ ಕಾದಂಬರಿಗಳಲ್ಲಿ ಸ್ತ್ರೀ ಪಾತ್ರಗಳು', 'ಕುವೆಂಪು ಅವರ ಕಾದಂಬರಿಗಳಲ್ಲಿ ಸ್ತ್ರೀತ್ವದ ಪ್ರತೀಕಗಳು' ಎಂಬ ಮೂರು ಲೇಖನಗಳಿವೆ. ಇವು ಈವರೆಗಿನ ಸಾಹಿತ್ಯ ಮತ್ತು ವಿಮರ್ಶೆಗಳಲ್ಲಿದ್ದ ದಮನಕಾರಿ ಮೌಲ್ಯಗಳ ಸಮರ್ಥನೆಯನ್ನು ಗುರ್ತಿಸುತ್ತವೆ.

ಈ ಭಾಗ ನನಗೆ ಹೆಚ್ಚಿನ ಮಹತ್ವದ್ದಾಗಿ ಸ್ತ್ರೀವಾದಿ ವಿಮರ್ಶೆ ಈಗ ಅಗತ್ಯವಾಗಿ ಮಾಡಬೇಕಾದ ಕೆಲಸವಾಗಿ ಕಾಣುತ್ತದೆ,

ಮಾಸ್ತಿಯವರ ಬರವಣಿಗೆ ನವ್ಯೋತ್ತರ ಕಾಲದಲ್ಲಿ ಸಹ ವಿಮರ್ಶಕರ ಮೆಚ್ಚಿಗೆಯನ್ನು ಪಡೆದಿದೆ. ವೆಂಕಟಿಗನ ಹೆಂಡತಿಗೇ ಒಂದು ನೈತಿಕತೆ, ಕೃಷ್ಣಮೂರ್ತಿಯ ಹೆಂಡತಿಗೇ ಒಂದು ನೈತಿಕತೆಯ ಮಾನದಂಡಗಳು ಯಾಕೆ ಇವೆ ಎಂಬ ಪ್ರಶ್ನೆ ಎಲ್ಲೋ ಒಮ್ಮೊಮ್ಮೆ ಕೇಳಿಸಿದರೂ ಸುಮಿತ್ರಾ ಅವರಷ್ಟು ಸ್ಪಷ್ಟವಾಗಿ ಇದನ್ನು ಈ ಹಿಂದೆ ಯಾರೂ ಗುರುತಿಸಿರಲಿಲ್ಲವೆಂದು ನನ್ನ ತಿಳುವಳಿಕೆ. ಸತೀತ್ವವನ್ನು ಕಳೆದುಕೊಂಡಾಗ ಸ್ತ್ರೀಯರು ಹುಚ್ಚಿಯರಾಗಬಹುದು, ಸಾಯಬಹುದು. ಆದರೆ ವಿಚ್ಛೇದನ ಮತ್ತು ಬೇರೆ ಬದುಕುವ ವಿಧಾನಗಳಿಗೆ ಇಲ್ಲಿ ಅವಕಾಶವಿಲ್ಲ ಎಂಬುದನ್ನು ಸುಮಿತ್ರಾ ಸರಿಯಾಗಿಯೇ ಗುರ್ತಿಸುತ್ತಾರೆ.

'ಪರಂಪರಾಗತ ಸ್ವೀಕೃತಿಯಲ್ಲಿ ಎಲ್ಲವೂ ತಣ್ಣ

ಗಿದೆ ಎಂಬಂತೆ ಮಾಸ್ತಿ ಚಿತ್ರಿಸಿರುವ ಸ್ತ್ರೀಲೋಕ ಕೇವಲ ತೋರಿಕೆಯದು'.

'ವೈದಿಕವೆನ್ನಬಹುದಾದ ಸಾಂಸ್ಕೃತಿಕ ಮೌಲ್ಯಗಳನ್ನು, ಜಾತಿ ಜನಾಂಗ, ವರ್ಗ, ದೇಶ, ಕಾಲಗಳೆಲ್ಲದರ ಮಿತಿಗಳಾಚೆಗೆ ಸಾರ್ವತ್ರಿಕಗೊಳಿಸಿ ಪುನಃ ಸೃಷ್ಟಿಸಬೇಕಾದ್ದು ಅವರಿಗೆ ಅನಿವಾರ್ಯವಾಗುತ್ತದೆ'.

ಮಹಿಳಾ ಸಾಹಿತ್ಯ ತನ್ನ ಮಿತಿಗಳನ್ನು ಮೀರಲಾರದು ಎಂದು ಹೇಳುತ್ತಲೇ ಬಂದಿರುವ ವಿಮರ್ಶಕರಿಗೆ ಪುರುಷ ಸಾಹಿತ್ಯವೂ ತನ್ನ ಮಿತಿಗಳನ್ನು ಮೀರಲಾರದು ಎಂದು ಹೇಳುತ್ತಾ 'ಮಾಯಣ್ಣನ ಕನ್ನಡಿ'ಯನ್ನು ನೋಡುವವರಿಗೆ ಬೆನ್ನಿಗೂ ಒಂದು ಕನ್ನಡಿ ಹಿಡಿಯುವ ವಿಚಯ ಈಗ ಮಾಡಬೇಕಾದ ಕೆಲಸವನ್ನೇ ಮಾಡುತ್ತಿದೆ.

ಪತ್ನಿಯೂ ಆಗದ ತಾಯಿಯೂ ಆಗದ ಸ್ತ್ರೀಯ ಸಾಧನೆಗಳನ್ನು ಇತ್ಯಾತ್ಮಕವಾಗಿ ನೋಡಲೊಲ್ಲದ ಕಾರಂತರ ಸಾಹಿತ್ಯ ಸಹಾ ಸುಮಿತ್ರಾ ಅವರ ವಿಮರ್ಶೆಯ ನಿಕಷಕ್ಕೆ ಒಳಗಾಗುತ್ತದೆ.

"ಪರಂಪರಾಗತ ಬದುಕಿನಲ್ಲಿ ಹುದುಗಿದ ಒಳಿತಿನ ಅಂಶಗಳನ್ನು ಮೆಚ್ಚಿ ಆದರದಿಂದ ಬರೆಯುವ ಮೂಲಕ ಐತಿಹಾಸಿಕವಾದ ಹೆಂಗಸರ ದುಡಿಮೆಗೆ, ತ್ಯಾಗಕ್ಕೆ ಮತ್ತು ಸೇವೆಗೆ ಮತ್ತು ಮಮತೆಗೆ ಹಿಂದಿನಿಂದ ಸಲ್ಲದೆ ಉಳಿದಿದ್ದ ಘನತೆಯನ್ನು ತಂದುಕೊಟ್ಟು ಗೌರವಿಸಿದ್ದಾರೆ ಎನ್ನುವುದು ಮಹತ್ವದ ಸಂಗತಿ. ಆದರೆ ಅದೇ ಹೊತ್ತಿನಲ್ಲಿ ಪ್ರಾಗೈತಿಹಾಸಿಕ ಕಾಲದ ಮಾತೃರೂಪಿ ಪಳೆಯುಳಿಕೆಗಳಂತೆ ತೋರುವಷ್ಟರ ಮಟ್ಟಿಗೆ ಇವರ ಸತ್ವ ಮನುಷ್ಯರ ನೆಲೆಗೆಟುಕದಂತೆ, ಅತಿಮಾನುಷ ನೆಲೆಗೆ ಸಲ್ಲುವಂತೆಯೂ ಇದ್ದು ಈ ಪಾತ್ರಗಳು ಅಚ್ಚರಿ ದಿಗ್ಭ್ರಮೆ ಹುಟ್ಟಿಸಿ ಬಿಡುತ್ತವೆ. ಸುತ್ತಲಿನ ಯಾವ ಕರಾಳ ಸಾಂಸ್ಕೃತಿಕ ಪರಿಸರವು ಇವರಿಂದ ತ್ಯಾಗವನ್ನು ಬೇಡಿ ಅಥವಾ ಅವರ ಮೇಲೆ ಅದನ್ನು ಹೇರಿ ತಾನು ವಿಜೃಂಭಿಸುತ್ತಿದೆಯೋ ಅದನ್ನು ತಿದ್ದುವ ಚಿಕಿತ್ಸಕ ಗುಣವೇ ಕಾರಂತರ ಜೀವನದರ್ಶನದ ವಿಶಿಷ್ಟತೆ. ಹಾಗಿರುವಾಗ ಈ ವಾಸ್ತವವನ್ನೇ ವೈಭವೀಕರಿಸುವುದು ಒಳವಿರೋಧದಿಂದ ಕೂಡಿಲ್ಲವೆ ?'' (ಪು. 190)

"ಕುವೆಂಪು ಕಾದಂಬರಿಗಳಲ್ಲಿ ಸ್ತ್ರೀತ್ವದ ಪ್ರತೀಕಗಳು'' ಎಂಬ ಲೇಖನದಲ್ಲಿ ಸುಮಿತ್ರಾ ಲಿಂಗಾಧಾರಿತ ಶೋಷಣೆಯನ್ನು ಅತ್ಯಂತ ಸೂಕ್ಷ್ಮಾತಿಸೂಕ್ಷ್ಮ ವಿವರಗಳಲ್ಲಿ ವ್ಯಂಗ್ಯದ ಒಳದನಿಯನ್ನಿಟ್ಟು ಬೃಹತ್ತಾಗಿ ಪ್ರತಿಪಾದಿಸುವ ವಿಷಯದಲ್ಲಿ ಕುವೆಂಪು ಅವರ ಕಾದಂಬರಿಗಳು ಅನನ್ಯವಾಗಿವೆ ಎಂಬುದನ್ನು ಗುರ್ತಿಸುತ್ತಾ.

"ಚಿನ್ನಮ್ಮ, ಸೀತೆಯರು ಅಧೀನತೆಯ ನೆಲೆಯಿಂದ ಸಮಾನತೆಯ ಮಾನವ ಜನಾಂಗವನ್ನು ಕೊಂಡೊಯ್ಯಬಲ್ಲ ವಿಕಾಸತತ್ವದ ಸಶಕ್ತ ಮೊಳಕೆಗಳನ್ನು ಹೊತ್ತಿರುವವರು. ಕಾದಂಬರಿಗಳು ಸೂಚಿಸುವ ಹೊಸಬದುಕಿನ ಮೌಲ್ಯಗಳ ಸಾಧ್ಯತೆಗೆ ಪ್ರತೀಕವಾದವರು'' ಎಂಬುದನ್ನು ಗುರ್ತಿಸುತ್ತಾರೆ.

ಮಾಸ್ತಿ, ಕುವೆಂಪು, ಕಾರಂತರು, ಈ ಮೂವರು ಲೇಖಕರು ಕನ್ನಡ ಸಾಹಿತ್ಯ, ಮತ್ತು ವಿಮರ್ಶೆಯ ವಲಯದಲ್ಲಿ ಇತ್ತೀಚಿನವರೆಗೂ ವಿಮರ್ಶೆಗಿಂತ ಪೂಜ್ಯತೆಗೆ ಪಕ್ಕಾಗಿದ್ದವರು, ಈ ಮೂರು ಮಹತ್ವದ ಲೇಖಕರನ್ನು ಸುಮಿತ್ರಾ ಅವರು ವಿಮರ್ಶೆಯ ಶೋಧಕ್ಕೆ ಒಳಗು ಪಡಿಸಿರುವ ರೀತಿ ಅನನ್ಯವಾದುದು.

ಈ ಬರಹ ವಿಚಯದ ವಿಮರ್ಶೆಯಲ್ಲ, ವಿಚಯದ ಮೊದಲ ಓದು, ಪರಿಚಯ.

ವಿಚಯವೆಂಬುದು ಒಂದು ಪುಸ್ತಕದ ಹೆಸರು ಮಾತ್ರವಷ್ಟೇ ಅಲ್ಲ, ಈಗ ಆಗಬೇಕಾದ ಸಾಂಸ್ಕೃತಿಕ ಪ್ರಕ್ರಿಯೆಯೂ ಹೌದು. ಆ ಪ್ರಕ್ರಿಯೆಯ ಸರಪಳಿಯ ಮೊದಲ ಹೆಜ್ಜೆಗಳು ಈಗಾಗಲೇ ಇಡಲ್ಪಟ್ಟಿವೆ. ಅಂಥ ಹೆಜ್ಜೆಗಳ ಸಾಲಿನಲ್ಲಿ ವಿಚಯ ಒಂದು ಮಹತ್ವದ ಹೆಜ್ಜೆ ಗುರುತು.

# ಸಾಹಚರ್ಯ ಬಯಸುವ ವಿಮೋಚನೆ

–ಡಾ|| ಕೆ. ಕೇಶವಶರ್ಮ



ಈಚಿನ ವರ್ಷಗಳಲ್ಲಿ ನಾವು ಸ್ತ್ರೀವಾದ, ಸ್ತ್ರೀತ್ವ, ವಿಮೋಚನೆ, ಇತ್ಯಾದಿ ಸಂಗತಿಗಳ ಬಗ್ಗೆ ಬಹಳ ಬರೆಯುತ್ತಿದ್ದೇವೆ. ಕಳೆದ ಹತ್ತಿಪ್ಪತ್ತು ವರ್ಷಗಳಲ್ಲಿಯಂತೂ ಕನ್ನಡದಲ್ಲಿ ಬರಹಗಾರ್ತಿಯರ ಸಂಖ್ಯೆ ಹೆಚ್ಚಿದೆ. ಒಂದು ಸಂದರ್ಭದಲ್ಲಿ ಕೇವಲ ಭ್ರಮೆಯನ್ನು ಮಾತ್ರ ಕಾದಂಬರಿಗಳಲ್ಲಿ ತುಂಬಿ, ವಾಸ್ತವಕ್ಕೆ ವಿಮುಖರಾಗಿ ಸ್ತ್ರೀಯರು ಬರೆಯುತ್ತಾರೆ ಎಂಬ ಆಪಾದನೆಯೂ ಒಂದಿತ್ತು. ಆದರೆ ಈಗಿನ ಪರಿಸ್ಥಿತಿಯು ಭಿನ್ನವಾಗಿದೆ. ಮಹಿಳೆಯರ ಬರವಣಿಗೆಯ ಬಗೆಗೆ ಈಗ ಅಂಥ ಅಸಹನೆಯಿಲ್ಲ, ಅಥವಾ ಔದಾಸೀನ್ಯವೂ ಇಲ್ಲ. ಇದಕ್ಕೆ ಕಾರಣವು ನಮ್ಮಲ್ಲಿ ಸ್ಪಷ್ಟವಾಗಿಯೇ ಇದೆ. ಚಾರಿತ್ರಿಕ ವಿಕಾಸ ಕ್ರಮದಲ್ಲಿ ಸ್ತ್ರೀಯರು ಅಕ್ಷರ ಕಲಿಯಬೇಕಾಯಿತು. ಆಧುನಿಕ ಜೀವನ ಕ್ರಮಕ್ಕೆ ತೆರೆದು ಕೊಳ್ಳ ಬೇಕಾಯಿತು. ವೈಯಕ್ತಿಕ ಅನುಭವವನ್ನು ಅಕ್ಷರ ಮಾಧ್ಯಮದಲ್ಲಿ ಹೇಳಬೇಕಾಯಿತು. ಆದರೆ ಇವೆಲ್ಲವೂ ಚರಿತ್ರೆಯ ಒಡಲಿನಲ್ಲಿಯೇ ಮೂಡುವ ಅಂಶಗಳು. ಹೀಗೆಂದು ಪೂರ್ಣವಾದ ಅರ್ಥದಲ್ಲಿ ಸ್ತ್ರೀಯರ ಬರವಣಿಗೆಯು ಚರಿತ್ರೆ ಮತ್ತು ಸಂಸ್ಕೃತಿಯ ಬೆಳವಣಿಗೆಯಿಂದ ಹೊರತಾದ ಅಂಶವೆಂದು ನಾವು ಗ್ರಹಿಸಬೇಕಾಗಿಲ್ಲ. ಸ್ತ್ರೀಯರ ಅನುಭವದ ಲೋಕ ಎನ್ನುವುದು ಚರಿತ್ರೆ ಸಂಸ್ಕೃತಿ ಹಾಗೂ ಮಾನವ ಸಂಬಂಧಗಳ ಒಟ್ಟು ರೂಪು ರೇಷೆಯೇ ಆಗಿರುತ್ತದೆ. ಸ್ತ್ರೀಯರ ಅನುಭವ ಎನ್ನುವುದು ಪುರುಷರ ಅನುಭವಕ್ಕಿಂತ ತೀರ ಭಿನ್ನವಾದ ಒಂದು ವೈಚಾರಿಕ ಚೌಕಟ್ಟೆಂದು ಪರಿಗಣಿಸಬೇಕಾಗಿಲ್ಲ. ಸ್ತ್ರೀತ್ವದ ಅನುಭವವೆಂಬುದು ಒಂದು ಪ್ರತ್ಯೇಕವಾದ 'ದೇಹಜನ್ಯ' ವೈಚಾರಿಕ ಸ್ವರೂಪವೆಂದು ಪರಿಗಣಿಸುವವರು ಒಂದೆಡೆಗೆ ಇದ್ದರೆ, ಸ್ತ್ರೀತ್ವದ ಅನುಭವ ಗ್ರಹಿಕೆಯ ಸ್ವರೂಪವು ನಿರ್ಣೀತಗೊಳ್ಳುವುದು ಸಾಮಾಜಿಕ ಗ್ರಹಿಕೆಯ ಅಂತರ್ವಲಯದಲ್ಲಿ ಎಂದು ಭಾವಿಸುವವರೂ ಇದ್ದಾರೆ. ಆದರೆ ಈ ಜಗಳವು ದೊಡ್ಡ ವಲಯವನ್ನು ನಿರ್ಮಿಸಿದೆ ಎಂದು ಭಾವಿಸಬೇಕಿಲ್ಲ. ಇದಕ್ಕೆ ಕಾರಣವೂ ನಮ್ಮ ನಡುವೆಯೇ ಇದೆ. 'ಕಣ್ಣುಗಳಲಿ ಕನಸು ತುಂಬಿ' ಕವನ ಸಂಕಲನ ವಿಮರ್ಶೆಗೆ ಮುನ್ನ ಈ ಮಾತುಗಳನ್ನು ಬರೆಯುವುದು ಅನಿವಾರ್ಯವಾಯಿತು.

ಹೇಮಾ ಪಟ್ಟಣಶೆಟ್ಟಿಯವರು ಕವಿತೆಯಲ್ಲಿ ಹೇಳುವ 'ಅನುಭವ'ವು ಕೇವಲ ಅವರೊಬ್ಬರದು ಅಲ್ಲ. ಸ್ವಂತ ಮತ್ತು ಸಮಾಜದ ನಡುವಣ ಬಿಕ್ಕಟ್ಟುಗಳನ್ನು ಹೇಮಾ ಇಲ್ಲಿನ ಕವಿತೆಗಳಲ್ಲಿ ಹೇಳುತ್ತಾರೆ.

**ಕಣ್ಣುಗಳಲ್ಲಿ ಕನಸು ತುಂಬಿ (ಕವನಗಳು)**
**ಹೇಮಾಪಟ್ಟಣಶೆಟ್ಟಿ, ಅನನ್ಯ ಪ್ರಕಾಶನ,**
**'ಹೂಮನೆ', ಶ್ರೀದೇವಿನಗರ, ವಿದ್ಯಾಗಿರಿ,**
**ಧಾರವಾಡ–580004, ಬೆಲೆ–ರೂ. 24–00**

ನನ್ನ ಕತ್ತಲೆ
ಬೆಳಕು ಮಾಡುವ ಗತ್ತು
ಗೊತ್ತಾಗಿದೆ
ಈಗ ಸೋಲುಗಳು ಕಳಚುವ ಮೆಟ್ಟಿಲು
ಗದ್ಯಮಯ ಮಾತಿನುಸುರು
ನನ್ನ ಪಾಲಿಗೆ ಅನುಭವ ಕಲ್ಪವೃಕ್ಷ

(ಸೋಲುಗಳ ಕೋಲು ಹಿಡಿದು. ಪು-16)

ಸಾಂಪ್ರದಾಯಿಕವಾಗಿ ಹೇರಲಾಗಿರುವ ಮೌಲ್ಯಗಳ ಬಗೆಗೆ ಹೇಮಾ ಹೀಗೆ ಪ್ರತಿಕ್ರಿಯಿಸುತ್ತಾರೆ.

ಕಾಲಗಳ ತಕ್ಕಂತೆ ಮೌಲ್ಯಕ್ಕೆ
ಬಣ್ಣಗಳು ಬೆಲೆಗಳು ಈ ತತ್ವ–ನೀತಿ

ಇರಲಿಲ್ಲ ನಿನ್ನ ಪ್ರತ್ಯಕ್ರಮದಿ
ಅನಾದಿನದ ಅನೂಚಾನ
ಸ್ತ್ರೀತ್ವದ ಹೂಬೇರನರೆದು
ತಿಕ್ಕಿತಿಕ್ಕಿ ಹಾಕಿದಿ ಗುಡ್ಡಿ
ನಿನ್ನ ಗಂಡು ಮಕ್ಕಳಿಗೆ ಮಾತ್ರ
ಪೌರುಷದ ಅಶ್ವಗಂಧೀ ಬೇರು
ಕುಡಿಸಿದ್ದು
ನೋಡುತ್ತಿದ್ದೆ ನಿನ್ನ ಪಕ್ಕ
ಬಿಟ್ಟು ಕಣ್ಣ ಪಿಳಿ ಪಿಳಿ.

(ಹಸುಮಗಳ ಹಂಬಲ ಪು. 58)

ಇಲ್ಲಿ ಕವಯಿತ್ರಿ ಗುರುತಿಸುವುದು ಸಾಂಪ್ರದಾಯಿಕವಾಗಿ ಹೇರಲಾಗಿರುವ ಗಂಡು ಹೆಣ್ಣಿನ ಲೈಂಗಿಕ ವ್ಯತ್ಯಾಸ ಹಾಗೂ ಮೌಲ್ಯಗಳ ಅಂಶಗಳನ್ನು. ಗಂಡು ಮತ್ತು ಹೆಣ್ಣು ಎನ್ನುವುದು ದೈಹಿಕ ವ್ಯತ್ಯಾಸ ಮಾತ್ರ. ಆದರೆ, ಅದರ ಸುತ್ತ ಹೇರಲಾಗಿರುವ ಮೌಲ್ಯಗಳು ಮಾತ್ರ ವಿಭಿನ್ನ, ಗಂಡನ್ನು ಪೌರುಷಕ್ಕೆ ಸಂಕೇತವಾಗಿ ನಾವು ಪರಿಭಾವಿಸಿಕೊಂಡರೆ, ಸ್ತ್ರೀಯನ್ನು ದೌರ್ಬಲ್ಯ ಹಾಗೂ ಚಂಚಲತೆಗೆ ಪ್ರತೀಕವೆಂದು ಪರಿಭಾವಿಸಿಕೊಂಡಿದ್ದೇವೆ. ಈ ಕಾರಣದಿಂದಲೇ ಸ್ತ್ರೀಯನ್ನು ಒಂದು ನಿರ್ದಿಷ್ಟ ಮಾನದಂಡದಲ್ಲಿ ಗುರುತಿಸುವ ಪ್ರಯತ್ನವನ್ನು ಮಾಡುತ್ತೇವೆ. ಇದೇ ಕವಿತೆಯಲ್ಲಿ ಹೇಮಾ ಹೇಳುವುದು ಹೀಗೆ.

ಈಗ ಅನ್ನ ಬಟ್ಟೆ
ಕೊಟ್ಟು ಮೈಥುನಕೆಳೆವ
ಗಂಡನಿಗೆ ನಾ ಬರೀ ಮೈ
ಬರಿ ಮೈ

(ಅದೇ ಪು. 58)

ಹೇಮಾ ಹೀಗೆ ಹೇಳುವಾಗಲೂ ತಾಯಿಯಂತೆ ತಾನು ಆಗಬಾರದು ಎಂಬ ಹಂಬಲವನ್ನು ವ್ಯಕ್ತ ಪಡಿಸುತ್ತಾರೆ. ಗಮನಿಸಬೇಕಾದ ಅಂಶವೆಂದರೆ ಈ ರೀತಿಯ ಅನುಭವಗಳನ್ನು ವ್ಯಕ್ತಪಡಿಸುವಾಗ ಯಾರಿಗೆ ಆಗಲಿ ಪ್ರತಿಭಟನೆಯ ದೊಡ್ಡ ಸ್ವರ ಹೊರಹೊಮ್ಮುವ ಸಾಧ್ಯತೆಯಿದೆ. ಆದರೆ ಹೇಮಾ ಅನುಭವಗಳನ್ನು ವ್ಯಕ್ತಪಡಿಸುವ ಸಂದರ್ಭದಲ್ಲಿ ಅದು ಕೀರಲು ಧ್ವನಿಯಾಗದ ಹಾಗೆ ಎಚ್ಚರವಹಿಸುತ್ತಾರೆ.

ಹೇಮಾ ತಾಯ್ತನ ಎಂಬ ಹೆಮ್ಮೆಯನ್ನು, ಹೆಣ್ಣಿಗೆ ಇರಬಹುದಾದ ವಿಶೇಷ ಅವಕಾಶವನ್ನು ನಿರಾಕರಿಸುವುದಿಲ್ಲ. ಕೆಲವು ಫೆಮಿನಿಸ್ಟರು ತಾಯ್ತನವನ್ನು ನಿರಾಕರಿಸುವುದರ ಹಿನ್ನೆಲೆಯಿಂದ ಹೇಮಾ ಅವರ 'ಬೆಳಕಿನರಮನೆಯಲ್ಲ', 'ಹೂಮಗಳಿಗೊಂದು ಹಾರೈಕೆ' ಇತ್ಯಾದಿ ಪದ್ಯಗಳನ್ನು ಗಮನಿಸಬೇಕು. ಈ ರೀತಿಯ ಪದ್ಯಗಳಲ್ಲಿ ತಾಯ್ತನದ ನಿರಾಕರಣೆಯ ಧ್ವನಿಯಿಲ್ಲ. ಇದರರ್ಥ ತಾಯ್ತನವನ್ನು ಅತೀ ವೈಭವೀಕರಿಸುತ್ತಿದ್ದಾರೆ ಎಂದಲ್ಲ. 'ಹೂ ಮಗಳಿಗೊಂದು ಹಾರೈಕೆ'ಯಲ್ಲಿ ಏಕ ಕಾಲಕ್ಕೆ ಸಮಾಜ–ತಾಯ್ತನವೆರಡನ್ನೂ ಸಮೀಕರಿಸಿ ಹೊಸತೊಂದರ ಕಡೆಗೆ ಮುಖಮಾಡಿದ್ದಾರೆ.

"ಅಭದ್ರತೆ, ಅಪಮಾನ, ಅವಲಂಬನೆಯ ನಂಜು
ನನ್ನನಾವರಿಸಿರುವಾಗ
ನಿನ್ನ ದಾರಿಯ ಮುಳ್ಳು ಹೂವಾಗಿಸುವ
ತಾಯ್ತನ ದೈವೀಶಕ್ತಿ ಇಲ್ಲ ಮಾಂತ್ರಿಕತೆ
ಇಲ್ಲ ಭ್ರಮೆ ನನಗೆ, ಬೇಡ ನಿನಗೂ''

(ಹೂ ಮಗಳಿಗೊಂದು ಹಾರೈಕೆ. ಪು.32)

ಹೆಣ್ಣು ಈ ದೇಶದಲ್ಲಿ ನೋವು, ಹತಾಶೆ, ಬಡತನ, ಜಾತಿ, ಅಸಮತೆಯ ನಡುವೆ ಬೇರು ಕಿತ್ತೆಸೆಯ ಬೇಕಾದ ಅಗತ್ಯವನ್ನು ಹೇಮಾ ಸಮರ್ಥವಾಗಿ ಪ್ರತಿಪಾದಿಸಿದರೆ 'ಬೆಳಕಿನರಮನೆಯಲ್ಲಿ' ತಾಯ್ತನದ ಸುಖವನ್ನು ಹೀಗೆ ಪ್ರತಿಪಾದಿಸುತ್ತಾರೆ.

ಇದನ್ನು ಜೀವನ
ಎನ್ನುತ್ತಾರೆ ಕೆಲವರು
ವಿಶ್ವವೆನ್ನುತ್ತಾರೆ ಜಗತ್ತು ಭೂಗೋಳ
ಸಂಸಾರ ತಾಪತ್ರಯ
.................. ............
........................
ಏನೇನೋ ಮಾತಾಡುತ್ತಾರೆ
ಜನರ ಈ ಎಲ್ಲ ಶಬ್ದಗಳ
ನಡುವೆ
ನನ್ನ ಮಕ್ಕಳ ಮಾತು
ಮಾತ್ರ ಕೇಳುತ್ತವೆ

(ಬೆಳಕಿನರಮನೆಯಲ್ಲಿ. ಪು. 39)

ಈ ರೀತಿಯ ಕವಿತೆಗಳಲ್ಲದೆ ಕೆಲವು ಅನುವಾದಿತ ಕವಿತೆಗಳು ಇಲ್ಲಿವೆ. ಅನುವಾದಿತ ಕವಿತೆಗಳು ಕೂಡ ಕನ್ನಡದ ರೀತಿಯನ್ನು ಒಳಗೊಂಡಿವೆ.

ಒಟ್ಟಾಗಿ ಇಲ್ಲಿನ ಕವಿತೆಗಳ ಬಗೆಗೆ ಕೆಲವು ಸಂಗತಿಗಳನ್ನು ಹೇಳಬೇಕು. ಇಲ್ಲಿನ ಕವಿತೆಗಳು ಸ್ತ್ರೀ ಬಿಂಬ ಸಹಜವೆಂಬಂತೆ ಒಡಮೂಡಿವೆ. ಆದರೆ ಅದನ್ನು ಒಂದು ವೈಚಾರಿಕ ಕೇಂದ್ರದಲ್ಲಿಯೇ ಬಂಧಿಸಿಡಬೇಕೆಂಬ ಹಟವಿಲ್ಲ. ಕೇವಲ ಹೇಳಿಕೆಗಳನ್ನೋ, ನಾಟಕೀಯ ದುಃಖವನ್ನೋ ಪ್ರಕಟಿಸಬೇಕೆಂಬ ಗುಂಗು ಹೇಮಾ ಅವರಿಗಿಲ್ಲ. ಇದನ್ನು ಅವರ ಕವಿತೆಗಳಲ್ಲಿರುವ ಪದ ಸಂಯೋಜನೆಗಳ ಮೂಲಕವೇ ನಾವು ಕಾಣಬಹುದು. ಹೇಮಾ ಅವರಿಗೆ ಪದ್ಯಗಳನ್ನು ಬರೆಯುವುದೆಂದರೆ ಅದು ಶಬ್ದಗಳ ಸರ್ಕಸ್ಸಲ್ಲ. ಗಂಭೀರವಾದ ತರ್ಕಗಳ ಮೂಟೆಯೂ ಅಲ್ಲ. ಆದುದರಿಂದಲೇ ಇಲ್ಲಿನ ಕವಿತೆಗಳಲ್ಲಿ ಅಂತಸ್ಥವಾಗಿರುವ ಸಂವೇದನೆಯೊಂದು ನಮ್ಮನ್ನು ತಟ್ಟಿ ಎಚ್ಚರಿಸುತ್ತದೆ. ಗಂಡು ಮತ್ತು ಹೆಣ್ಣು, ಸ್ತ್ರೀ ಕೇಂದ್ರಿತ ಸಮಾಜ ಮತ್ತು ಪುರುಷ ಕೇಂದ್ರಿತ ಸಮಾಜವೆಂಬ ಸರಳ ಸಮೀಕರಣವು ಹೇಮಾ ಅವರಿಗೆ ಮುಖ್ಯವೆಂದು ಅನಿಸಿಲ್ಲ.

ಇಷ್ಟಿದ್ದರೂ ಹೇಮಾ ಅವರ ಕವಿತೆಗಳಲ್ಲಿ ಯಾವ ದೌರ್ಬಲ್ಯವೂ ಇಲ್ಲವೆಂದು ಹೇಳಲು ಬರುವುದಿಲ್ಲ 'ಹಸಿವು', 'ಸೋಲುಗಳ ಕೋಲು ಹಿಡಿದು'-ಈ ರೀತಿಯ ಪದ್ಯಗಳನ್ನು ಗಮನಿಸಿದರೆ ಹೇಮಾ ಇನ್ನು ನವ್ಯದ ತೆಕ್ಕೆಯಿಂದ ಬಿಡಿಸಿಕೊಂಡಂತೆ ಕಾಣುವುದಿಲ್ಲ, ಈ ಮೊದಲೇ ಹೇಳಿದಂತೆ ಈ ಸಂಕಲನದಲ್ಲಿ ಕೆಲವು ಕವಿತೆಗಳು ಯಾವುದೇ ರೀತಿಯ ಮುಲಾಜಿಗೆ ಒಳಗಾಗದೆ ಉಂಟಾದ ಸೃಷ್ಟಿಗಳಾದರೆ ಮತ್ತೆ ಕೆಲವು ಕವಿತೆಗಳು ಯಾಕೋ ತುಂಬಾ ದೂರದಲ್ಲಿ ನಿಂತು ಮಾತನಾಡುವ ರೀತಿಯಂತೆ ಭಾಸವಾಗುತ್ತದೆ. ಹೇಮಾ ಅವರು ಇನ್ನಷ್ಟು ಆತ್ಮೀಯವಾಗಿ, ಸಹಜವಾಗಿ ಬರೆಯಬಲ್ಲರು, ಹೇಳ ಬೇಕಾದ್ದನ್ನು ಹೇಳಬಲ್ಲರು. ವಿಮೋಚನೆಯ ಸಾಧ್ಯತೆಗಳಲ್ಲಿ ಸಾಹಚರ್ಯವೂ ಮುಖ್ಯ ಎಂಬುದನ್ನು ಅವರು ಮನಗಂಡಿದ್ದಾರೆ ಎಂಬುದಕ್ಕೆ ಈ ಕವನ ಸಂಕಲನವೇ ಸಾಕ್ಷಿಯಾಗಿದೆ.

---

## ಗರ್ಭ ಧರಿಸುವ ಗಂಡುಗಳು

**–ನೇಮಿಚಂದ್ರ**

ಅಡಿಗೆ, ಮನೆಗೆಲಸ ಹೆಂಗಸರಿಗೆ ಸೇರಿದ್ದು, ಅದಕ್ಕೆ ಗಂಡಸರನ್ನು ಎಳೆಯುವುದು ಅಖಂಡ ಅಪರಾಧ ಎಂದು ಭಾವಿಸಿದ ನನ್ನ ಅತ್ತೆ ಮನೆಯಲ್ಲಿ, ನಾ ಸ್ತ್ರೀವಾದ, ಸಮಾನತೆ ಎಂದು ಹೇಳಹೊರಟಾಗೆಲ್ಲ 'ಹೆಣ್ಣು ಗಂಡು ಒಂದೇ ಹೇಗಾಗುತ್ತೆ, ಮಕ್ಕಳನ್ನು ಹೆರೋದು ನೀನಲ್ಲವೆ ?' ಎಂದು ವಾದಿಸುತ್ತಾರೆ. ಹೆರಿಗೆಗೂ, ಅಡಿಗೆಗೂ ಏನು ಸಂಬಂದವೋ ಗೊತ್ತಿಲ್ಲ, ಅಥವಾ ಗಂಡಸರಿಗೆ ಅಡಿಗೆ, ಹೆರಿಗೆಯಷ್ಟೇ ಅಸಾಧ್ಯದ್ದೋ ತಿಳಿದಿಲ್ಲ, ಆದರೆ ಹೆಣ್ಣಿನ ಹೆರುವ ಕ್ರಿಯೆ ಅವಳೆಲ್ಲ ವೈಭವೀಕರಣಕ್ಕೆ ಕಾರಣವಾದಂತೆ ಅವಳ ಬಂಧನಕ್ಕೂ, ಬದುಕಿನ ಸೀಮಿತತೆಗೂ ಕಾರಣವಾಯಿತು. ಬಿಡುವಿಲ್ಲದ ಬಸಿರು ಬಾಣಂತನಗಳಲ್ಲಿ, ಆಯ್ಕೆ ಇಲ್ಲದ ತಾಯ್ತನದಲ್ಲಿ ಬಂಧಿಯಾದ ಹೆಂಗಸರಿಗೆ ಮತ್ಯಾವ ಮಹತ್ವಾಕಾಂಕ್ಷೆಗೂ ಪುರಸೊತ್ತಿಲ್ಲದ ಕಾಲವೊಂದಿತ್ತು. ಕುಟುಂಬಯೋಜನಾ ವಿಧಾನಗಳು ಹೆಣ್ಣಿನ ಬದುಕಿನಲ್ಲಿ ಕ್ರಾಂತಿಕಾರಿ ಬದಲಾವಣೆ ತಂದವು. ತಮ್ಮ ದೇಹದ ಮೇಲಿನ ಹತೋಟಿ, ನಿಯಂತ್ರಣವನ್ನು ಒದಗಿಸಿದವು. ಹೀಗಿದ್ದೂ, ತಾಯ್ತನ ವಿನ್ನೂ ಹೆಣ್ಣು ದೇಹದೊಡನೆ ಜೋಡಿಯಾಗಿರುವ ಕಾರಣ, ಇಡೀ ಬದುಕಿನಲ್ಲಿ ಒಂದೋ ಎರಡೋ ಬಸಿರು ಅಗಾಧ ಭಾರವೇನೂ ಅಲ್ಲದಿದ್ದರೂ, ಈ ತಾಯ್ತನವೇ ಇಂದಿಗೂ, ಕೌಟುಂಬಿಕ ಜೀವನದಲ್ಲಿ, ನೌಕರಿಗಳಲ್ಲಿ, ಸಾಹಸದ ಜಗತ್ತಿನಲ್ಲಿ, ಹೆಣ್ಣು ನುಗ್ಗ ಬಯಸುವಲ್ಲೆಲ್ಲ, ಯಾವಾವಾಗ ಯಾರಾರ ಅನುಕೂಲಕ್ಕೆ ಹೇಗೆ ಬೇಕೊ ಹಾಗೆ ಹೆಣ್ಣನ್ನು ಅರ್ಥೈಸಲು, ಬೇರೆ ಇಡಲು, ಅವಳ ಹಕ್ಕುಗಳನ್ನು ಕಿತ್ತುಕೊಳ್ಳಲು ನೆಪವಾಗಿದೆ. ಹೆಣ್ಣು ದೇಹದೊಡನೆ ತಾಯ್ತನ ಅಂಟಿರುವುದು ಪ್ರಾಸಂಗಿಕ. ಅದಕ್ಕೆ ಮಹತ್ತರದ ಉದ್ದೇಶವನ್ನು ಕಲ್ಪಿಸಬೇಕಿಲ್ಲ, ಹೆಣ್ಣು ದೇಹದಿಂದ ತಾಯ್ತನ ಬೇರ್ಪಟ್ಟೊಡನೆ 'ಹೆಣ್ಣು' ಜೀವನ ನಿರರ್ಥಕವೇನೂ ಆಗಲಾರದು. ನಿಜಕ್ಕೂ ಹೆಣ್ಣು ದೇಹದಿಂದ ಸಂತಾನೋತ್ಪತ್ತಿ ಕ್ರಿಯೆ ಬೇರ್ಪಟ್ಟ ದಿನ ಸ್ತ್ರೀ ಸಂಪೂರ್ಣ ಬಿಡುಗಡೆ ಪೊಂದು

ತ್ತಾಳೆ, ಈ ವೈಭವೀಕರಣದಿಂದ, ಅದರೊಟ್ಟಿನ ಶೋಷಣೆಯಿಂದ, ಒಂದು ಕಾಲಕ್ಕೆ ಕೇವಲ ಸ್ತ್ರೀ ದೇಹದಲ್ಲಿ ಮಾತ್ರ ಸಾಧ್ಯವಾಗಿದ್ದ ವೀರ್ಯಅಂಡಾಣುಗಳ ಕಲೆಯುವ ಪ್ರಕ್ರಿಯೆ ಇಂದು ಒಂದು ಪ್ರಣಾಳದಲ್ಲಿ ಸಾಧ್ಯವಿದೆ. ಭ್ರೂಣ ತನ್ನ ಮೊದಮೊದಲ ಅನೇಕ ಘಂಟೆಗಳನ್ನು ಪ್ರಣಾಳದಲ್ಲಿ ಕಳೆಯಬಹುದಿದೆ. ಆ ದಿನವೂ ಬಹುಶಃ ದೂರವಿರಲಾರದು. ಸಂಪೂರ್ಣವಾಗಿ ಸ್ತ್ರೀ ದೇಹದ ಹೊರಗೇ ಭ್ರೂಣ ಬೆಳೆದು ಮಗುವಾಗುವ ದಿನ. ಆದರೆ ಮನುಷ್ಯರಲ್ಲದಿದ್ದರೂ ಪ್ರಾಣಿಗಳಲ್ಲಿ ಗರ್ಭ ಧರಿಸುವ ಗಂಡುಗಳಿವೆ ಎಂದರೆ ಅಚ್ಚರಿಯೆ ?

ಇಂದು ಆಕ್ಸಫರ್ಡ್ ವಿಶ್ವವಿದ್ಯಾಲಯದ ಸೋಮವಿರ್ಲ್ಲೆ ಕಾಲೇಜಿನಲ್ಲಿ ಸಂಶೋಧಕಿಯಾಗಿರುವ ಪ್ರಾಣಿಶಾಸ್ತ್ರಜ್ಞೆ, ಅಮಂಡಾ ವಿನ್ಸೆಂಟ್ ಸಮುದ್ರದಾಳದ ಹವಳದ ತೆನೆಗಳ ನಡುವೆ ವಾಸಿಸುವ 'ಕಡಲಕುದುರೆ' (ಸೀಹಾರ್ಸ್) ಎಂಬ ಜಾತಿಯ ಮೀನುಗಳ ಅಧ್ಯಯನ ಮಾಡಿರುವಾಕೆ. ಈ ಮೀನುಗಳನ್ನು ಕುರಿತು ಇಲ್ಲಿಯವರೆಗೂ ಹೆಚ್ಚಿನ ಮಾಹಿತಿ ದೊರೆತಿರಲಿಲ್ಲ, ಹೆಚ್ಚು ಸಂಶೋಧನೆ ನಡೆದಿರಲಿಲ್ಲ. ಅಮಂಡಾ ತನ್ನ ಪ್ರಯೋಗಶಾಲೆಯಲ್ಲಿ ಮಾತ್ರವಲ್ಲದೆ, ಸಮುದ್ರದಾಳದಲ್ಲಿ ಕಡಲಕುದುರೆಗಳ ಸಹಜ ವಾಸಸ್ಥಾನದಲ್ಲಿಯೇ ಅವುಗಳನ್ನು ಸೂಕ್ಷ್ಮವಾಗಿ ಆವಲೋಕಿಸಿ, ನೀರಿನಡಿಯಲ್ಲಿ ಗಂಟೆಗಟ್ಟಲೆ, ತಿಂಗಳುಗಳ ಕಾಲ ಅಧ್ಯಯನ ನಡೆಸಿದ ಕಾರಣವಾಗಿ ಈ ವಿಜ್ಞಾನಿ ಕುತೂಹಲದ ಮಾಹಿತಿಗಳನ್ನು ಹೊರತಂದಿದ್ದಾರೆ. 'ಸ್ವತಃ ಸ್ತ್ರೀವಾದಿಯಾದ ನನಗೆ ಗಂಡು ಗರ್ಭ ಧರಿಸುವ ಈ ತಿರುಗುಮುರುಗಾದ ಹೆಣ್ಣು ಗಂಡಿನ ಪಾತ್ರಗಳು, ಕಾರ್ಯಕ್ಷೇತ್ರ ವಿಂಗಡಣೆ ವಿಶೇಷ ಕುತೂಹಲದ ಸಂಶೋಧನೆಯಾಗಿದೆ' ಎನ್ನುತ್ತಾರೆ ಅಮಂಡಾ. ಅಮಂಡಾಳ ಕಡಲಕುದುರೆಗಳ ಸಂಶೋಧನೆ 1986ರಲ್ಲಿ ಆರಂಭವಾಯಿತು. ಆಕೆ ಇಂಗ್ಲೆಂಡಿನ ಕೇಂಬ್ರಿಡ್ಜ್ ವಿಶ್ವವಿದ್ಯಾಲಯದಲ್ಲಿ ಸಂಶೋಧನಾ ವಿದ್ಯಾರ್ಥಿಯಾಗಿದ್ದ ಸಮಯ. ಲೈಂಗಿಕ ವ್ಯತ್ಯಾಸಗಳ ವಿಕಾಸದ ಬಗ್ಗೆ ಕುತೂಹಲಿಗಳಾದ ಈ ಸ್ತ್ರೀವಾದಿ ಜೀವಶಾಸ್ತ್ರಜ್ಞೆಗೆ ಕಡಲಕುದುರೆಗಳು ಅತ್ಯಂತ ಆಕರ್ಷಕ ವಿಷಯವಾಗಿದ್ದವು. ತನ್ನ ಪ್ರಯೋಗಶಾಲೆಯಲ್ಲಿ ಕಡಲಕುದುರೆಗಳನ್ನು ಸಾಕಿ ಅನೇಕ ಪ್ರಯೋಗಗಳನ್ನು ನಡೆಸಿದಾಕೆ, ಮುಂದೆ ಆಸ್ಟ್ರೇಲಿಯಾದ ಸಿಡ್ನಿ ಬಂದರಿನ ಬಳಿ ಸಮುದ್ರದಾಳಕ್ಕಿಳಿದು ಕಡಲಕುದುರೆಗಳನ್ನು ಅಧ್ಯಯಿಸಿದಳು.

ಜಗತ್ತಿನ ಯಾವ ಗಂಡು ಪ್ರಾಣಿಯೂ ಕಡಲಕುದುರೆಯಷ್ಟು ಮಕ್ಕಳನ್ನು ಕುರಿತು ಕಾಳಜಿವಹಿಸುವುದು ಕಂಡುಬಂದಿಲ್ಲ. ಮೀನುಗಳಲ್ಲಿ ಗಂಡು ಮೀನುಗಳು ಮೊಟ್ಟೆಗಳನ್ನು ಕಾವಲು ಕಾದು ಸಂರಕ್ಷಿಸುವುದಲ್ಲದೆ, ಮೊಟ್ಟೆಗಳಿಗೆ ಆಮ್ಲಜನಕ ನೀಡಲು ಗಾಳಿ ಬೀಸುತ್ತವೆ, ಈ ಮೂಲಕ ತಮ್ಮ ಸಂತಾನದಲ್ಲಿ ಹೆಚ್ಚಿನ ಕಾಳಜಿ ತೋರುತ್ತವೆ.

ಕಡಲಕುದುರೆಗಳು ಅಕ್ಟೋಬರ್ ಮತ್ತು ಏಪ್ರಿಲ್ ತಿಂಗಳ ನಡುವೆ ಕೂಡಿ ಸಂತಾನೋತ್ಪತ್ತಿ ಮಾಡುತ್ತವೆ. ಕಡಲಕುದುರೆಗಳಲ್ಲೂ ಎಲ್ಲಾ ಪಾಣಿಗಳಂತೆಯೇ ಗಂಡು ವೀರ್ಯವನ್ನು ಉತ್ಪತ್ತಿ ಮಾಡುತ್ತದೆ, ಹೆಣ್ಣು ಅಂಡಾಣುಗಳನ್ನು ತಯಾರಿಸುತ್ತದೆ, ಆದರೆ ಈ ಪ್ರಾಣಿಗಳ ವಿಶೇಷವೆಂದರೆ, ಹೆಣ್ಣು ಅಂಡಾಣುಗಳನ್ನು ಸ್ಖಲಿಸಿ ಹೋಗುತ್ತದೆ, ಹಾಗೂ ಗಂಡು ಗರ್ಭ ಧರಿಸುತ್ತದೆ. ಈ ಗಂಡುಗಳಲ್ಲಿ ಬಾಲದ ನಡುಭಾಗದಲ್ಲಿ ಮರಿಗಳಿಗಾಗಿ ಒಂದು ಚೀಲವಿರುತ್ತದೆ. ಹೆಣ್ಣು ಬಂದು ಗಂಡನ್ನು ಕೂಡಿ, ತನ್ನ ಮೊಟ್ಟೆಗಳನ್ನು ಈ ಚೀಲದಲ್ಲಿ ತುಂಬಿ ಹೋಗುತ್ತಾಳೆ. ಮೊಟ್ಟೆಗಳು ಗಂಡಿನ ಒಡಲಚೀಲದಲ್ಲಿ ಫಲಿತು ಗಂಡು ಗರ್ಭ ಧರಿಸುತ್ತದೆ. 21 ದಿನಗಳ ಗರ್ಭಾವಸ್ಥೆಯ ನಂತರ ಪ್ರಸವ ವೇದನೆಯಲ್ಲಿ ಗಂಡು ಹೊರಳಿ ಹೊಸೆದು ಮರಿಗಳನ್ನು ಹೊರಹಾಕುತ್ತದೆ. ಈ ಗಂಡು, ಗರ್ಭಾವಸ್ಥೆಯ ಎಲ್ಲಾ ಘಟ್ಟಗಳನ್ನು ಅನುಭವಿಸುವುದಲ್ಲದೆ, ಗರ್ಭಿಣಿ ಹೆಣ್ಣಿನಲ್ಲಿ ಎದೆಹಾಲು ಮೂಡಲು ಪ್ರಚೋದಿಸುವ ಪ್ರೊಲಾಕ್ಟಿನ್ ಎಂಬ ಚೋದಕಸ್ರಾವ (ಹಾರ್ಮೋನ್)ವೇ ಗಂಡು ಕಡಲಕುದುರೆಯ ಗರ್ಭಾವಸ್ಥೆಯನ್ನು ನಿರ್ದೇಶಿಸುತ್ತದೆ. ಮನುಷ್ಯ ಪ್ರಾಣಿಯೂ ಸೇರಿದಂತೆ ಉಳಿದ ಪ್ರಾಣಿ ಜಗತ್ತಿನಲ್ಲಿ, ಹೆಣ್ಣು ತನ್ನ ಭ್ರೂಣಕ್ಕೆ ಆಮ್ಲಜನಕವನ್ನು ನೀಡಿ, ಪೋಷಕ ವಸ್ತುಗಳನ್ನು ರವಾನಿಸಿ, ಗರ್ಭಾಶಯದ ವಾತಾವರಣವನ್ನು ನಿಯಂತ್ರಿಸುವಂತೆ, ಗಂಡು ಕಡಲಕುದುರೆ ಕೂಡಾ ಇವೆಲ್ಲವನ್ನೂ ತನ್ನ ಒಡಲಚೀಲದಲ್ಲಿಯ ಭ್ರೂಣಗಳಿಗೆ ಒದಗಿಸಿ, ಮರಿಗಳನ್ನು ಹೊರುವ, ಹೆರುವ ಪೋಷಿಸುವ ಕೆಲಸವನ್ನು ಸಮರ್ಥವಾಗಿ ನಿರ್ವಹಿಸುತ್ತದೆ.

ಳು ಹೊರುವ ಹೆರುವ ಕ್ರಿಯೆಯಲ್ಲಿ ರಣ, ಹೆಣ್ಣುಗಳು 'ಗಂಡುಗುಣ'ಗಳನ್ನು ರ್ಶಿಸಬಹುದೆ ಎಂಬ ಕುತೂಹಲದ ಪ್ರಶ್ನೆ ನ್ನು ಕಾಡಿತ್ತು. ಗಂಡು-ಹೆಣ್ಣಿನ ಕಾರ್ಯ ಗುಮುರುಗಾದ ಈ ಪರಿಸ್ಥಿತಿಯ ಹೆಣ್ಣು ಆಕ್ರಮಣಕಾರಿಯಾಗಿ, ಕಂಡ ಗಂಡುಗಳನ್ನೆಲ್ಲ ಡಿ ತನ್ನ ಮೊಟ್ಟೆಗಳನ್ನು ಸ್ಖಲಿಸಲು ಹೋಗುತ್ತದೆಯೆ ಎಂಬ ಪ್ರಶ್ನೆ ಅಮಂಡಾಗೆ ಎದುರಾಯಿತು. ಇತರ ಜಾತಿಯ ಗಂಡುಗಳಂತೇ ಸಂತಾನೋತ್ಪತ್ತಿಯೇ ಮುಖ್ಯ ಗುರಿಯೆನ್ನುವಾಗ ಇಲ್ಲಿ ಹೆಣ್ಣು ಹೆಚ್ಚು ಹೆಚ್ಚು ಗಂಡುಗಳೊಡನೆ ಕೂಡಿ ತನ್ನ ವಂಶವನ್ನು ಬೆಳೆಸಲು ಹೋಗಬೇಕಲ್ಲವೆ ? ಆದರೆ ಕಡಲಕುದುರೆಗಳು ಈ 'ಸಹಜ ಗಂಡು ಗುಣ'ವನ್ನೇನೂ ಪ್ರದರ್ಶಿಸಲಿಲ್ಲ. ಅಮಂಡಾ ಕಂಡಂತೆ ಕಡಲಕುದುರೆಗಳು ಒಂದಕ್ಕೊಂದು ಅತ್ಯಂತ ನಿಷ್ಠವಾಗಿದ್ದವು. ಈಕೆ ಆಸ್ಟ್ರೇಲಿಯಾದ ಸಮುದ್ರದಾಳಕ್ಕೆ ಬೆಳ್ಳಂಬೆಳಗ್ಗೆ ನಾಲ್ಕು ಗಂಟೆಗೇ ಸ್ಕೂಬಾ ಸಲಕರಣೆ ಏರಿಸಿಕೊಂಡು ಮುಳುಗಿ ಒಂದೊಂದೂ ಕಡಲಕುದುರೆಗಳನ್ನು ಪತ್ತೆ ಹಚ್ಚಿ, ಅವುಗಳನ್ನು ಅತಿ ಮೆಲುವಾಗಿ ಹಿಡಿದು, ಕೊರಳಿಗೊಂದು ಹತ್ತಿದಾರದಲ್ಲ ಪೋಣಿಸಿದ ಸೂಕ್ಷ್ಮ ಗುರುತಿನ ಬಿಲ್ಲೆಯನ್ನು ತೊಡಗಿಸಿ, ಮತ್ತೆ ಅವುಗಳನ್ನು ಅವುಗಳ ಪಾಡಿಗೆ ಬಿಟ್ಟುಬಿಟ್ಟು, ಗಂಟೆಗಟ್ಟಲೆ, ದಿನಗಟ್ಟಲೆ, ತಿಂಗಳುಗಟ್ಟಲೆ ಸಮುದ್ರದಾಳದಲ್ಲಿ ಕಾದು, ಅವುಗಳ ಪ್ರತಿ ಚಲನವಲನವನ್ನು ವೀಕ್ಷಿಸಿ, ತನ್ನ ಜಲಾಂತರ್ಗಾಮಿ ನೋಟು ಪುಸ್ತಕದಲ್ಲಿ ಮಾಹಿತಿ ಬರೆದುಕೊಂಡು ಸಂಕಲಿಸಿದ ಪರಿಣಾಮ, ಇವು ಒಂದಕ್ಕೊಂದು ಅತ್ಯಂತ ನಿಷ್ಠವಾದ ಸಂಗತಿಯಂತೆಯೇ ಅನೇಕ ಕುತೂಹಲದ ವಿಷಯಗಳು ಹೊರಬಿದ್ದವು. ಹೆಣ್ಣು ದಿನವೂ ತಾನು ಕೂಡಿದ ಗಂಡನ್ನು ಹುಡುಕಿ ಹೋಗಿ ಆತನೊಡನೆ ಮಾತ್ರ ಸರಸವಾಡಿ ಮತ್ತೆ ತನ್ನ ವಾಸಸ್ಥಾನಕ್ಕೆ ಹಿಂತಿರುಗುವುದು ತಿಳಿದು ಬಂತು. ಹಾದಿಯಲ್ಲಿ ಹಾದ ಇತರ ಗಂಡುಗಳಿಗೆ ಗಮನವನ್ನೇ ಕೊಡದೆ ತನ್ನವನನ್ನು ಹುಡುಕಿ ಹೋಗುತ್ತದೆ. ಆ ಗಂಡೂ ಕೂಡಾ ಅಷ್ಟೇ, ಇದೇ ಹೆಣ್ಣಿಗೆ ಕಾದವನು. ಒಮ್ಮೆ ಒಂದು ಗಂಡು ಕಡಲಕುದುರೆ ಗಾಯಗೊಂಡು ಅದರ ಒಡಲಚೀಲ ಹರಿದಾಗ, ಹೆಣ್ಣು ಬೇರೆ ಗಂಡುಗಳೊಡನೆ ಕೂಡಿ ತನ್ನ ವಂಶ ಮುಂದುವರೆಸುವ 'ಹುಟ್ಟು ಸಹಜ ಪ್ರಾಣಿಗುಣ'ವನ್ನು ಪ್ರದರ್ಶಿಸದೆ, ಅದೇ ಗಂಡು ವಾಸಿಯಾಗಿ, ಪುನಃ ಚೇತರಿಸಿಕೊಳ್ಳುವವರೆಗೂ ಕಾದು, ನಂತರ ಕೂಡಿದವು. ಅಷ್ಟೇ ಅಲ್ಲ, ಗರ್ಭಾವಸ್ಥೆಯ 21 ದಿನವೂ ಪ್ರತಿ ಮುಂಜಾನೆಯೂ ಹೆಣ್ಣು ಕಡಲಕುದುರೆ ತನ್ನ ಸಂಗಾತಿಯ ವಾಸಸ್ಥಾನಕ್ಕೆ ಬಂದು ಭೇಟಿ ನೀಡಿ, ಗರ್ಭಾವಸ್ಥೆ ಮುಗಿದು ಹೆತ್ತೊಡನೆ ಮತ್ತೊಮ್ಮೆ ಜೊತೆಯಾಗಿ ಮೊಟ್ಟೆ ಊರಿ ಹೋಗುತ್ತಿತ್ತು. ಈ ಸಂತಾನೋತ್ಪತ್ತಿಯ ತಿಂಗಳುಗಳಲ್ಲಿ ಗಂಡು ಸತತವಾಗಿ ಗರ್ಭಾವಸ್ಥೆಯಲ್ಲಿರುತ್ತದೆ. ಹೆತ್ತೊಡನೆ ಮತ್ತೆ ಹೊರುವ ಕ್ರಿಯೆಯಲ್ಲಿ ಸಿಲುಕಿ ನಿಂತಿದ್ದು. ಇವು ಅಮಂಡಾಳ ಸಂಶೋಧನೆಯಿಂದ ಹೊರಬಿದ್ದ ಕುತೂಹಲದ ಸಂಗತಿಗಳು.



Reg No· MAG (5) PRC. DEGL 036/89/87
BOOK-POST Periodicals

To

If undelivered please return to :
Jagruthi Mahila Adhyayana Kendra
401, Vijay Tower, 2nd Main' RPC Layout
Vijayanagar, II Stage, Bangalore-40